# ಪಾನರಿ

ತಿಂಗಳ ಪತ್ರಿಕೆ

ಜುಲೈ : 1998

* ‘ವಿರಚನೆ’ - ಒಂದು ವಿವೇಚನೆ
* ‘ಅಸಹಜ ಸಾವುಗಳು’ ಒಂದು ಅಧ್ಯಯನ : ವಿಮೋಚನಾ ಮಹಿಳಾ ಹಕ್ಕುಗಳ ವೇದಿಕೆ
* ಈ ಸಲದ ಚಳಿಗಾಲಕ್ಕೆ ಸಬರರ ಮೇಳವಿಲ್ಲ
* ಒಂದು ಯಶಸ್ವೀ ವಿಶ್ಲೇಷಣೆ
* ‘ಹೂಮಳೆ’ ಸುರಿಸಿದ ಪ್ಲಾಸ್ಟಿಕ್ ದಳಗಳು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 13 ಸಂಚಿಕೆ : 6
ಜುಲೈ : 1998



ವಿಳಾಸ :
**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.
ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

**ಈ ಸಂಚಿಕೆಯಲ್ಲಿ....**



*ಮೈಸೂರಿನಲ್ಲಿರುವ ಓದುಗರು*

**"ಮಾನಸ"**

*ಪ್ರತಿಗಳಿಗಾಗಿ ಹಾಗೂ ಚಂದಾ*
*ನವೀಕರಣಕ್ಕಾಗಿ ಸಂಪರ್ಕಿಸಿ*

**ವೆಂ. ವನಜ**

ಎಲ್. 3, ಏಳನೇ ತಿರುವು, ವಿ.ವಿ. ವಸತಿ ಗೃಹ
ಮಾನಸ ಗಂಗೋತ್ರಿ, ಮೈಸೂರು - 570 006

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಕೌಟುಂಬಿಕ ಹಿಂಸೆ - ಈ ಸಮಸ್ಯೆಯ ಸುತ್ತ 20 ವರ್ಷಗಳಿಂದ ಮಹಿಳಾ ಚಳುವಳಿಗಳು ಹೋರಾಡುತ್ತಲೇ ಬಂದಿವೆ. ಆದರೂ ನಮ್ಮ ಮುಂದಿರುವುದು ನಿರಾಶಾದಾಯಕ ವಾತಾವರಣವೇ. ಹಾಗೆಂದು ಬದಲಾವಣೆಗಳಾಗಿಯೇ ಇಲ್ಲವೆಂದಲ್ಲ. ಆದರೆ ಆ ಬದಲಾವಣೆಗಳು ಅಪೇಕ್ಷಿತ ಮಟ್ಟದಲ್ಲಿ ಇಲ್ಲವೆಂಬುದು ನಮ್ಮನ್ನು ಧೃತಿಗೆಡಿಸುವ ವಿಚಾರ. ಆಡಳಿತಾತ್ಮಕ, ಪೋಲೀಸ್, ಸಿ.ಓ.ಡಿ., ವೈದ್ಯರು, ಆಸ್ಪತ್ರೆ ವ್ಯವಸ್ಥೆಯ ಮಜಲುಗಳು ಸಿಕ್ಕು ಸಿಕ್ಕಾದ ಹಾಗೆ ಉರಿದು ಹೋದ ಮಹಿಳೆಗೆ ಎಷ್ಟರ ಮಟ್ಟಿಗೆ ನ್ಯಾಯ ದೊರಕುತ್ತದೆ ಎಂಬುದು ನಮ್ಮ ಹೋರಾಟದ ಮುಂದಿರುವ ಸವಾಲು.

ಇಂತಹ ಸಮಸ್ಯೆಗಳಿಗೆ ಹೆಚ್ಚುತ್ತಿರುವ ಕನ್‌ಸ್ಯೂಮರಿಸಂ ಕೂಡಾ ಬಹುದೊಡ್ಡ ಕಾರಣವೆಂಬುದು ಒಂದು ಅಂಶ. ನಿರುದ್ಯೋಗ, ಅಗತ್ಯ ವಸ್ತುಗಳ ಬೆಲೆ ಏರಿಕೆ, ಮಧ್ಯಮ ವರ್ಗದ ಜೀವನ ಮಟ್ಟದ ಕುಸಿತ, ಬಡಜನರಿಗೆ ಬದುಕೇ ದುಸ್ಥಿತಿಗೊಂಡಿರುವುದು ಇವೆಲ್ಲದಕ್ಕೂ ಕನ್‌ಸ್ಯೂಮರಿಸಂ ತಳಕು ಹಾಕಿಕೊಂಡಿದೆ. ಕೌಟುಂಬಿಕ ಹಿಂಸೆ. ಹಿಂಸೆ ಇದು ವಿವಿಧ ರೂಪಗಳಲ್ಲಿ, ಪ್ರಕಾರಗಳಲ್ಲಿ ಹೊರಟಿರುತ್ತಿರುವುದಕ್ಕೂ ಇದು ಕಾರಣವಾಗಿದೆ. ಆರ್ಥಿಕ ಉದಾರ ನೀತಿ ಜನರ ಬದುಕುವ ಹಕ್ಕನ್ನು ಕಸಿದುಕೊಳ್ಳುವ ಜೊತೆಗೆ ಮಹಿಳೆಯರ ಮೇಲಿನ ಹಿಂಸೆಯ ನಾನಾ ರೂಪಗಳಿಗೂ ಕಾರಣವಾಗತೊಡಗಿದೆ. ವ್ಯವಸ್ಥೆಯ ವಿವಿಧ ರೀತಿಯ ಸಿಕ್ಕುಗಳ ಬದಲಾವಣೆಗೆ ಹೋರಾಡುತ್ತಲೇ ನಾವು ನಮ್ಮ ದೇಶಕ್ಕೆ ಬೇಕಾಗುವ ಆರ್ಥಿಕ ಚೌಕಟ್ಟಿನ ಬಗ್ಗೆ ಒಂದು ವೈಚಾರಿಕ ಪ್ರಶ್ನೆ ಮಾಡಿಸಿಕೊಳ್ಳುವುದೂ ಅಗತ್ಯವಾಗುತ್ತದೆ.

'ದೇಶೀಯತೆ'ಯ ಕಡೆಗೆ ತಿರುಗುವುದು, ದೇಶೀಯ ತಾಂತ್ರಿಕತೆಯ ಕಡೆಗೆ ಹೊರಳುವುದು ತಕ್ಷಣಕ್ಕೆ ಸಿಗುವ ಉತ್ತರವಾಗಿದೆ. ಆದರೆ ಪ್ರಪಂಚದ ಆರ್ಥಿಕತೆಯ ಜೊತೆಗೆ ತಳಕು ಹಾಕಿಕೊಂಡಿರುವ ಭಾರತದ ರಾಜಕಾರಣ ಎಷ್ಟರ ಮಟ್ಟಿಗೆ ದೇಶೀಯ ತಾಂತ್ರಿಕತೆಯಿಂದ ಜನರ ಜೀವನಮಟ್ಟ ಎತ್ತರಿಸುವುದು ಸಾಧ್ಯವೇ ಎಂಬುದು ಪ್ರಶ್ನೆಯೇ. ಗಾಯತ್ರಿ ನಾವಡನಂತವರು ಇಂತಹ ನಿರ್ವಸಾಹತೀಕರಣಕ್ಕಾಗಿ ಭಾರತದ ಮಹಿಳಾ ಚಳುವಳಿಯನ್ನು ಮೌಖಿಕ ಪರಂಪರೆಯಿಂದ ಕಟ್ಟುವ ಅಗತ್ಯವಿದೆ ಎನ್ನುತ್ತಾರೆ. ದೇಶೀಯತೆಯ ವಾದದ ಹಿನ್ನೆಲೆಯಲ್ಲಿ ಇಂತಹ ನಿಲುವು ಆಪ್ಯಾಯಮಾನವಾಗಿ ಕಂಡರೂ ಸಹ ಸಮಸ್ಯೆಗಳ ಕ್ಲಿಷ್ಟತೆಗೆ ಉತ್ತರಗಳಾಗುವುದಿಲ್ಲ.

ಮಹಿಳೆಯರಿಗೆ 33% ಪಾರ್ಲಿಮೆಂಟಿನಲ್ಲಿ ಮೀಸಲಾತಿ ನೀಡಲಾಗುವ ವಿಚಾರದಲ್ಲಿ ಪ್ರತಿ ರಾಜಕೀಯ ಪಕ್ಷವೂ, ಪಕ್ಷದ ಸದಸ್ಯರೂ, ವರ್ತಿಸುತ್ತಿರುವ ರೀತಿಯನ್ನು ನೋಡಿದರೇ ಸಾಕು, ಈ ರಾಜಕಾರಣ ಮಹಿಳೆಯರಿಗೆಷ್ಟು ನ್ಯಾಯ ಒದಗಿಸಬಹುದು ಎಂಬ ಸತ್ಯವನ್ನು ನಾವು ಅರಿತುಕೊಳ್ಳಬಹುದಾಗಿದೆ.

ನಮ್ಮ ಮುಂದಿರುವ ಸವಾಲುಗಳು ಇಷ್ಟೊಂದು ಸಂಕೀರ್ಣವಾಗಿರುವಾಗ - ಮಹಿಳಾ ಚಳುವಳಿಯ ಹೋರಾಟದ ನೆಲೆ ಬರಿಯ ಲಿಂಗ ಪ್ರಭೇದ ವಿವಕ್ಷೆ ಗುರುತಿಸುವುದು, ಮತ್ತು ಪ್ರತಿರೋಧಿಸುವುದು ಅಷ್ಟೇ ಮುಖ್ಯವಾಗಬಾರದು. ಲಿಂಗಪ್ರಭೇದ ನೆಲೆ ದಾಟಿ ಹೋಗಿ ಸ್ತ್ರೀ ಶಕ್ತಿಯನ್ನು ಸ್ಥಾಪಿಸಿದ ಸ್ತ್ರೀ ಸಂಕಥನ ಮಾದರಿಗಳನ್ನು ಕಟ್ಟಿಕೊಳ್ಳಬೇಕಾದ ಜವಾಬ್ದಾರಿ ಇದೆ ಎನ್ನುವ ವಾದ ಬರಿಯ ಸಂಸ್ಕೃತಿಯ ಕುರುಡು ವೈಭವೀಕರಣದ ರೀತಿಯದ್ದಾಗಿಬಿಡುತ್ತದೆ. ರಾಜಕೀಯ, ಆರ್ಥಿಕ ಸವಾಲುಗಳ ಜೊತೆ ತಳಕು ಹಾಕಿಕೊಳ್ಳದ ಸಂಸ್ಕೃತಿಯ ಹೋರಾಟ ಅಷ್ಟಕ್ಕೇ ಸೀಮಿತವಾಗಿ ಏನೂ ಪರಿಣಾಮ ಬೀರದೇ ಕೂಡಾ ಹೋಗಬಹುದಾಗಿದೆ. ಪ್ರತಿರೋಧವಿಲ್ಲದೇ, ಅದು ಸಾಮೂಹಿಕವಾದ ಪ್ರತಿರೋಧವಿಲ್ಲದೇ ವೈಯಕ್ತಿಕ ಅಂತಃಚೇತನಗಳು ಎಲ್ಲೋ ಮುರುಡಿ ಹೋಗಬಹುದಾದ ಸಾಧ್ಯತೆಯ ಬಗ್ಗೆಯು ಯೋಚಿಸಿ ನಾವಿಂದು ಭಾರತದ ಮಹಿಳಾ ಹೋರಾಟದ ಧ್ವನಿಯನ್ನು ಎಲ್ಲಾ ನೆಲೆಗಳಿಂದಲೂ ಜಾಗೃತಗೊಳಿಸಿ ಎಚ್ಚರಿಕೆಯಿಂದ ಹೋರಾಡಬೇಕಾಗಿದೆ.

# 'ವಿರಚನೆ' - ಒಂದು ವಿವೇಚನೆ

ಪಾಶ್ಚಿಮಾತ್ಯರ 'ಏಕಶಿಲ್ಪ' ಸಿದ್ಧಾಂತದಿಂದ, 'ಪ್ರತಿರೋಧ'ದ ಗುಣದಿಂದ, 'ಹೆಣ್ಣು ಬಲಿ ಪಶು' ಎಂಬ ತಾತ್ವಿಕ ನಿಲುವಿನ ಸ್ತ್ರೀವಾದಿ ಸಿದ್ಧಾಂತದಿಂದ ಇಂದು ಭಾರತದ ಸ್ತ್ರೀವಾದಿಗಳ ವಿಮರ್ಶೆ, ಸಾಂಸ್ಕೃತಿಕ ವಿಮರ್ಶೆ, ರಾಜಕೀಯ ವಿಮರ್ಶೆ ಪ್ರಭಾವಿತಗೊಂಡಿವೆ. ಈ ರೀತಿಯ ಪ್ರಭಾವಗಳು ಭಾರತೀಯ ಸ್ತ್ರೀವಾದವನ್ನು ಕಟ್ಟಿಕೊಡುವಲ್ಲಿ ಸೋಲುತ್ತವೆ. ಭಾರತೀಯ ಸ್ತ್ರೀವಾದಕ್ಕೆ ಲಿಂಗ ಪ್ರಭೇದ ವಿವಕ್ಷೆ ಗುರುತಿಸುವುದು / ಪ್ರತಿರೋಧಿಸುವುದು ಅಷ್ಟೇ ಮುಖ್ಯವಾಗಬಾರದು, ಇದನ್ನು ದಾಟಿ ಸ್ತ್ರೀ ಶಕ್ತಿ ಸ್ಥಾಪಿಸಿದ ಸ್ತ್ರೀ ಸಂಕಥನ ಮಾದರಿ ಕಟ್ಟುವ ಜವಾಬ್ದಾರಿ ಇದೆ. ಸ್ತ್ರೀವಾದಿ ಸಾಹಿತ್ಯ ಪಾಶ್ಚಾತ್ಯ ಸ್ತ್ರೀವಾದಿ ಸಿದ್ಧಾಂತಕ್ಕೆ ಬದ್ಧವಾಗಿ ಸಾಹಿತ್ಯ ಸಂಗತಿ ಚರ್ಚಿಸುತ್ತದೆ. ಮೌಖಿಕ ಪರಂಪರೆ ಮುಂದಿಟ್ಟುಕೊಂಡು ಸ್ತ್ರೀವಾದಿ ಸಿದ್ಧಾಂತದ ಕಡೆಗೆ ಚಲಿಸುವ ದಿಕ್ಕಿನಿಂದ ಭಾರತೀಯ ಸ್ತ್ರೀವಾದ ಕಟ್ಟುವ ಅಗತ್ಯ ಇದೆ ಎನ್ನುವ ಗಾಯತ್ರಿಯವರ ಸ್ತ್ರೀವಾದದ ಬಗೆಗಿನ ಗ್ರಹಿಕೆಗಳು ಹಾಗೂ ಆರೋಪಗಳು ಅವರ 'ವಿರಚನೆ' ಪುಸ್ತಕದಲ್ಲಿ ಕಂಡು ಬರುತ್ತವೆ. ಪಾಶ್ಚಾತ್ಯ ಸ್ತ್ರೀವಾದಿ ಸಿದ್ಧಾಂತದಿಂದ ಬಿಡುಗಡೆ ಪಡೆದು, ಭಾರತೀಯ ಏಕಶಿಲ್ಪದಿಂದಲೂ ಬಿಡುಗಡೆ ಪಡೆದು ಭಾರತದ ಬಹುಮುಖಿ ಸಂಸ್ಕೃತಿಗಳ ಸ್ತ್ರೀ ಶಕ್ತಿ ಸ್ಥಾಪಿಸಿದ ಸ್ತ್ರೀ ಕಥನ ಮಾದರಿಯಿಂದ ಭಾರತೀಯ ಸ್ತ್ರೀವಾದ ಕಟ್ಟಬೇಕು ಎನ್ನುವ ಗಾಯತ್ರಿಯವರು ಭಾರತೀಯ ಸ್ತ್ರೀವಾದ ಕಟ್ಟುವುದಕ್ಕೆ ಮೇಲಿನ ಎಚ್ಚರಗಳು ಅಗತ್ಯ ಎಂಬ ತಮ್ಮ 'ವಿಷನ್'ನ್ನೂ ಕೂಡ 'ವಿರಚನೆ'ಯಲ್ಲಿ ಪ್ರತಿಪಾದಿಸುತ್ತಾರೆ.

'ವಿರಚನೆ'ಯ ಲೇಖಕಿಯ ಮುಖ್ಯ ಕಾಳಜಿ ಇರುವುದು ಸಂಸ್ಕೃತಿಯ ಬಹುಮುಖತೆಯಲ್ಲಿ. ಈ ಬಹುಮುಖಿ ಸಂಸ್ಕೃತಿಯ ಸಾಧ್ಯತೆಗಳ ಬಗ್ಗೆ ಗಂಭೀರವಾಗಿರುವಂತಹ ಗಾಯತ್ರಿ ನಾವಡರಂತಹ ಗಂಭೀರ ಮರ್ಶಕಿಯೂ ಕೂಡ ತಮ್ಮ 'ವಿರಚನೆ' ಯಲ್ಲಿ - ಮೌಖಿಕ ಪರಂಪರೆಯ ಕಡೆಯಿಂದ ಚಲಿಸಿದರೆ ಮಾತ್ರ ಭಾರತೀಯ ಸ್ತ್ರೀವಾದ ಕಟ್ಟುವುದು ಸಾಧ್ಯ ಎಂದು ಧ್ವನಿಸುವುದು ಅವರ ಮೂಲಭೂತವಾದ ಕಾಳಜಿಗೇ ವಿರೋಧಾಭಾಸವಾಗಿ ಕಂಡುಬರುತ್ತದೆ. 'ಬಹುಮುಖತೆ'ಯ ಪ್ರಶ್ನೆಯನ್ನು ಮಹಿಳಾ ಚಳುವಳಿ, ಸ್ತ್ರೀವಾದಿ ಸಿದ್ಧಾಂತ ತೆಗೆದುಕೊಂಡಷ್ಟು ಗಂಭೀರವಾಗಿ ಇನ್ನಾವ ಸಿದ್ಧಾಂತ, ಚಳುವಳಿಯೂ ತೆಗೆದುಕೊಂಡಿರಲಿಕ್ಕಿಲ್ಲ. 'ಇದೇ ಶ್ರೇಷ್ಠ, 'ಇದೇ ಸತ್ಯ', ಅಥವಾ 'ಇದೇ ನಮ್ಮೆದುರಿನ ಸಿದ್ಧ ಮಾದರಿ' ಎಂದು ಸ್ವಾಯತ್ತ ಮಹಿಳಾ ಸ್ತ್ರೀವಾದಿ ಸಿದ್ಧಾಂತವಂತೂ ಮಾತನಾಡುವುದೇ ಇಲ್ಲ. ಆಸ್ತಿ ಇರುವ ಹೆಣ್ಣಿನ ಹೋರಾಟದ ನೆಲೆ ಒಂದಾದರೆ, ಆಸ್ತಿ ಇಲ್ಲದ ಹೆಣ್ಣಿನ ಹೋರಾಟದ ನೆಲೆ ಒಂದಾಗಿರುತ್ತದೆ. ಆ ನೆಲೆಯಲ್ಲಿ ಅವರ ಆಯ್ಕೆಗಳೂ ಬೇರೆ ಬೇರೆಯಾಗಿರುತ್ತವೆ. ವರ್ಗಪ್ರಜ್ಞೆ ಮೀರಿ ಚಳುವಳಿ ಮುಂದೆ ಹೋಗುವುದು ಇಂತಹ ಕಡೆಯೇ. ರಾಜಕೀಯ, ಉತ್ಪಾದನಾ ಸಂಬಂಧಗಳೂ ಇಲ್ಲಿ ಮುಖ್ಯವಾಗುತ್ತವೆ. ನಾನಾ ವರ್ಗಗಳಿಂದ, ನಾನಾ ಜಾತಿಗಳಿಂದ, ನಾನಾ ಬುಡಕಟ್ಟುಗಳಿಂದ ಬರುವ ಹೆಂಗಸರಿಗೆ ಆಯ್ಕೆಗಳು ಅನೇಕ. ಹಾಗಾಗಿ ಆಯ್ಕೆಗಳ ಬಗ್ಗೆ, ಬಹುಮುಖಿ ಸಂಸ್ಕೃತಿಯ ಅಸ್ತಿತ್ವದ ಬಗ್ಗೆ, ಮಹಿಳಾ ಚಳುವಳಿ ಗಂಭೀರವಾದ ಪ್ರಶ್ನೆಗಳನ್ನೇ ಎತ್ತಿದೆ. ಬಹುಮುಖೀ ಸಂಸ್ಕೃತಿಗಳ ಗುರುತಿಸುವಿಕೆ ಮಹಿಳೆಯರ ವಿವಿಧ ಆಯ್ಕೆಗಳನ್ನು ಸಾಧ್ಯವಾಗಿಸುತ್ತದೆ ಎಂದೂ ವಾದಿಸುತ್ತದೆ. 'ಸಮಾನ ನಾಗರಿಕ ಸಂಹಿತೆ'ಯ ಸಮಸ್ಯೆಯಲ್ಲಿ ಹಲವಾರು ಮಹಿಳಾ ಗುಂಪುಗಳು ಈ ವೈವಿಧ್ಯತೆ, ಬಹುಮುಖತೆಯ ಕಡೆಗೇ ಒತ್ತು ಕೊಡುತ್ತಿರುವುದು ನಮ್ಮ ಕಣ್ಣೆದುರಿಗಿರುವ ಸತ್ಯ. ಸ್ತ್ರೀವಾದದ ಸೈದ್ಧಾಂತಿಕ ಚೌಕಟ್ಟಿನಲ್ಲಿ 'ಬಹುಮುಖತೆ' ಹಾಗೂ ಅದರಲ್ಲಿನ ಆಯ್ಕೆಗಳು ಮುಖ್ಯವಾಗುತ್ತದೆ. ಕಳೆದ 20 ವರ್ಷಗಳಿಂದ ಮಹಿಳಾ ಚಳುವಳಿಯು ಮಹಿಳೆಯರ ವೈಯಕ್ತಿಕ ಸಮಸ್ಯೆಗಳನ್ನು ಬಗೆಹರಿಸುವಾಗ ಅಥವಾ ಸಮಾನ ನಾಗರಿಕ ಸಂಹಿತೆಯಂತಹ ಗಂಭೀರ ಸಮಸ್ಯೆಗಳನ್ನು ಚರ್ಚಿಸುವಾಗ ಕೂಡಾ ಮೇಲ್ಕಂಡ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡಿದೆ. ಹಾಗಾಗಿಯೇ ಲೆಸಬಿಯನ್ ಸಂಬಂಧಗಳನ್ನು ಮಹಿಳೆಯರ ಹಕ್ಕುಗಳನ್ನಾಗಿಯೇ ನೋಡುವ ನೋಟ ಸ್ತ್ರೀವಾದಿಗಳಿಗಿರುತ್ತದೆ.

ಹೀಗೆ ಚಳುವಳಿಯಲ್ಲಿ ಮಹಿಳೆಯರ ವಾಸ್ತವ ಸಮಸ್ಯೆಗಳಿಗೆ ಬಹುಮುಖಿ ಸಂಸ್ಕೃತಿಯಲ್ಲಿಯೇ ಉತ್ತರ ಹುಡುಕುವ ಚಳುವಳಿ ಸ್ತ್ರೀರೂಪ ಕಥನಗಳ ಬಗ್ಗೆ ನೇತ್ಯಾತ್ಮಕವಾಗಿ ಯೋಚಿಸುವುದು ಸಾಧ್ಯವೇ ಇಲ್ಲ. ದೆಹಲಿಯಲ್ಲಿ 'ಕಾಳಿ' ಎನ್ನುವ ಹೆಸರಿನಲ್ಲಿರುವ ಮಹಿಳಾ ಪ್ರಕಾಶನ ಕೂಡಾ ಸ್ತ್ರೀ ಶಕ್ತಿ ಸ್ವಾಯತ್ತತೆಯನ್ನು ಎತ್ತಿ ಹಿಡಿಯುವಂತಹ ಅಗತ್ಯದಲ್ಲಿಯೇ ಅಸ್ತಿತ್ವಕ್ಕೆ ಬಂದಿದ್ದು. ಚಳುವಳಿಯು ಹೀಗೆ ಸಂಸ್ಕೃತಿಯ 'ಏಕಶಿಲ್ಪ'ಕ್ಕೇ ಪ್ರಾಮುಖ್ಯತೆ ಕೊಟ್ಟಿಲ್ಲ ಎಂದು ನಾನು ವಾದಿಸುವುದು ಶುದ್ಧ ರಾಜಕೀಯ ಚೌಕಟ್ಟಿನಿಂದ ಮಾತ್ರ ಮಾತನಾಡಿದ ಹಾಗೆ ಎನ್ನಿಸಬಹುದು. ಮಹಿಳಾ ಗುಂಪುಗಳು, ವಿಶೇಷವಾಗಿ ಸ್ವಾಯತ್ತ ಮಹಿಳಾ ಗುಂಪುಗಳು ಬರಿಯ ರಾಜಕೀಯ ಚೌಕಟ್ಟಿನಿಂದ ಮಾತ್ರ ಚಳುವಳಿಯನ್ನು

ಹಮ್ಮಿಕೊಂಡಿಲ್ಲ. ಚಳುವಳಿಗೆ, ಸ್ತ್ರೀವಾದಿ ಸಿದ್ಧಾಂತಕ್ಕೆ ರಾಜಕೀಯ ವೈಚಾರಿಕ ಚೌಕಟ್ಟು ಎಷ್ಟು ಅಗತ್ಯವೋ ಅದರೊಳಗಿನ ಸಾಂಸ್ಕೃತಿಕ ಮಜಲುಗಳೂ ಕೂಡಾ ಅಷ್ಟೇ ಅಗತ್ಯವಾಗಿರುತ್ತವೆ ಎಂಬುದನ್ನು - ಮಹಿಳಾ ಚಳುವಳಿಯಲ್ಲಿ ಹಾಗೂ ಸ್ತ್ರೀವಾದಿ ಸಾಹಿತ್ಯದಲ್ಲಿಯೂ ಗಂಭೀರವಾಗಿಯೆ ಪರಿಗಣಿಸಲಾಗಿದೆ.

ಈ ವಿಚಾರದಲ್ಲಿ ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಶೋಧನೆಯತ್ತ ನಾವು ದೃಷ್ಟಿ ಹಾಯಿಸಬಹುದಾಗಿದೆ. ಸ್ವಾತಂತ್ರ್ಯಪೂರ್ವ ಲೇಖಕಿಯರ ಬಗ್ಗೆ ಅತ್ಯಂತ ಗಂಭೀರವಾದ ಶೋಧನೆಗಳು ನಡೆದಿವೆ. ಮಹಿಳೆಯರ ಇತಿಹಾಸದ ಹೆಜ್ಜೆಗಳನ್ನು ಗುರುತಿಸುವಲ್ಲಿ - ನಂಜನಗೂಡು ತಿರುಮಲಾಂಬ, ಕಲ್ಯಾಣಮ್ಮ, ಬೆಳಗೆರೆ ಜಾನಕಮ್ಮ, ಸಾವಿತ್ರಮ್ಮ ಇವರುಗಳ ಬಗ್ಗೆ ಅತ್ಯಂತ ಗಂಭೀರವಾದ ಚರ್ಚೆಗಳು ನಡೆದಿವೆ, ಪುಸ್ತಕಗಳು ಪ್ರಕಟವಾಗಿವೆ, ಸ್ವಾತಂತ್ರ್ಯಪೂರ್ವ ಲೇಖಕಿಯರ ಸಾಧನೆಗಳು ಮಹಿಳಾ ಶಕ್ತಿಯನ್ನು ಎತ್ತಿ ಹಿಡಿಯುವಲ್ಲಿನ ಪ್ರಮುಖ ಹೆಜ್ಜೆಗಳನ್ನಾಗಿಯೇ ಗುರುತಿಸಬಹುದಾಗಿದೆ. ಪ್ರತಿರೋಧಗಳ ನಡುವೆಯೂ ಅಂತಃ ಚೇತನ ಉಳಿಸಿಕೊಂಡ, ಮಹಿಳೆಯರಿಗಾಗಿ ದುಡಿದ ಈ ಮಹಿಳೆಯರ ಇತಿಹಾಸದ ಶೋಧನೆ ಸ್ತ್ರೀವಾದಿಗಳು ಇತ್ತ ಕೊಡುಗೆಯಾಗಿದೆ. ಇದನ್ನು ಗಾಯತ್ರಿ ನಾವಡರವರು ಎಲ್ಲಿಯೂ ಪ್ರಸ್ತಾಪಿಸುವುದೇ ಇಲ್ಲ. ಸ್ತ್ರೀವಾದಿ ಎಲ್ಲಾ ಪ್ರಯತ್ನಗಳು, ಮಹಿಳಾ ಅಧ್ಯಯನ, ಸ್ತ್ರೀವಾದಿ ಅಧ್ಯಯನಗಳು ಪಾಶ್ಚಾತ್ಯ ಪಠ್ಯದ ಅವತರಣಿಕೆಗಳಾಗಿಯೇ ರೂಪಗೊಳ್ಳುತ್ತಿರುವುದರಿಂದ ಸ್ತ್ರೀವಾದದ ಬಗ್ಗೆ, ಸ್ತ್ರೀವಾದಿ ವಿಮರ್ಶಕರ ಬಗ್ಗೆ - ಪಶ್ಚಿಮದ ಗಾಳಿಯಾಗಿಯೇ ನಿಂತವರು ಎಂಬಂತಹ ದಾಷ್ಟ್ಯದ ಮಾತುಗಳನ್ನು ಗಾಯತ್ರಿಯವರು ಬರೆಯುತ್ತಾರೆ.

''ಇದೇ ಶ್ರೇಷ್ಠ', 'ಇದೇ ಅತ್ಯುತ್ತಮ ಮಾದರಿ' ಎನ್ನುವ ಬಗೆಯ ನಿಲುವುಗಳನ್ನು ಹೊಂದಿರುವವರು ಮಾತ್ರ ''ಭಾರತೀಯ ಸ್ತ್ರೀವಾದಿ ಚಿಂತನೆಗಳು ಜಾನಪದ ಅಥವಾ ಮೌಖಿಕ ಪರಂಪರೆ ಮತ್ತು ಮಾತೃಪ್ರಧಾನ ಬುಡಕಟ್ಟು ಸಂಸ್ಕೃತಿಗಳು ಪ್ರಕಟಿಸುವ ಸ್ತ್ರೀಶಕ್ತಿ ಪ್ರತಿಮೆ, ಆಕೃತಿಗಳನ್ನು ಶೋಧಿಸಬೇಕಾಗಿದೆ, ಸ್ತ್ರೀ ಶಕ್ತಿಯ ಇಂತಹ ರಚನೆಗಳಿಂದ ಹೆಣ್ಣಿನ ಹೊಸ ಚರಿತ್ರೆ ಕಟ್ಟಲು ಸಾಧ್ಯವಾಗುತ್ತದೆ (ಪು. 13) ಎನ್ನುವ ಮಾತುಗಳನ್ನು ಬರೆಯಲು ಸಾಧ್ಯ. ಇದು ಕೆಲವು ಸಲ ಕುರುಡು ವೈಭವೀಕರಣ ಹಾಗೂ ಉದ್ಧಟತನ ಎಂದೂ ಕೂಡ ಅನ್ನಿಸಿಬಿಡುತ್ತದೆ. ಇಂತಹವರಿಗೆ ಈ ಸಾಂಸ್ಕೃತಿಕ ನೆಲೆ ಮಾತ್ರ ಅತ್ಯಂತ ಶ್ರೇಷ್ಠವಾಗಿ ಕಾಣಿಸಿಕೊಂಡು ಭಾರತೀಯ ಸ್ತ್ರೀವಾದ ರೂಪುಗೊಳ್ಳಬೇಕಾದ ತಾತ್ವಿಕ ನೆಲೆಯಾಗಿ ಬಿಡುತ್ತದೆ.

ಸ್ತ್ರೀವಾದಿಗಳಿಗೆ ಪ್ರಶ್ನೆ ಇರುವುದು ಇಲ್ಲಿಯೇ. ವಿವಿಧ ಮುಖಗಳ ಸಾಂಸ್ಕೃತಿಕ ಸಾಧ್ಯತೆಗಳು ಸ್ತ್ರೀವಾದಿ ಹೋರಾಟದ ಒಂದು ನೆಲೆಯ ಶಕ್ತಿ ನಿಜ. ಆದರೆ ಅದೇ ಅಂತಿಮವಾದ ಅಥವಾ ಶ್ರೇಷ್ಠವಾದ ನೆಲೆಯಲ್ಲ. ಸಂಸ್ಕೃತಿಯ ಅಧ್ಯಯನದ ಶ್ರೇಷ್ಠತೆ ಎತ್ತಿ ಹಿಡಿಯುತ್ತ ಬರಿಯ ಭಾರತೀಯ ಮೌಖಿಕ ಪರಂಪರೆಯ ಶ್ರೇಷ್ಠತೆಯನ್ನೇ ಮೆರೆಯಿಸುವುದು ದುರಂತವಾಗಿ ಬಿಡುತ್ತದೆ. ಮೀರಾ, ಅಕ್ಕಮಹಾದೇವಿ ಸ್ತ್ರೀ ಶಕ್ತಿ ಮಾದರಿಗಳೂ ಕೂಡ ಸ್ತ್ರೀವಾದಿ ಸಿದ್ಧಾಂತಕ್ಕೆ ಪ್ರೇರಣೆಯಾಗಬಹುದೇ ಹೊರತು ಇಂದಿನ ಸಂದರ್ಭದ ಸ್ತ್ರೀವಾದಿ ಸವಾಲುಗಳಿಗೆ ಉತ್ತರವಾಗುವುದಿಲ್ಲ. ಉತ್ಪಾದನಾ ಸಂಬಂಧಗಳು ಬದಲಾಗುತ್ತಾ ಹೋದ ಹಾಗೆ, ಆರ್ಥಿಕ ಚಾಲನೆಗಳು ಹಿಗ್ಗಾ-ಮುಗ್ಗಿ ಎಳೆದಾಡಲ್ಪಡುತ್ತಿರುವ ಸಂದರ್ಭದಲ್ಲಿ ಹೆಣ್ಣಿನ ಸಮಸ್ಯೆಗಳು ಸಂಕೀರ್ಣ ರೂಪ ತಳೆಯುತ್ತಿವೆ. ಸಿರಿ ಪಾಡ್ದನ ನಮಗೆ ಖಂಡಿತವಾಗಿ ಪ್ರೇರಣೆಯಾಗಬೇಕು ನಿಜ ಆದರೆ ಇಂದಿನ ಉತ್ಪಾದನಾ ಸಂಬಂಧಗಳಲ್ಲಿನ ಹೆಣ್ಣಿನ ಸಂಕೀರ್ಣ ಸಮಸ್ಯೆಗಳಿಗೆ ಆಕೆ ಉತ್ತರವಾಗಲಾರಳು. ಸಿರಿ ಅಂತಃಚೇತನದಲ್ಲಿ ಇಡಿಯ ವ್ಯವಸ್ಥೆಯ ವಿರುದ್ಧ ನಿಂತಳು ನಿಜ. ಈ ಮಟ್ಟಿಗೆ ಪ್ರೇರಕ -ಶಕ್ತಿ ನಿಜ. ಆದರೆ ಈ ಕತೆ ತನ್ನಷ್ಟಕ್ಕೆ ಚಳುವಳಿಗೆ ಬೇಕಾದ, ಸ್ತ್ರೀವಾದಕ್ಕೆ ಬೇಕಾದ ತಾತ್ವಿಕತೆಯನ್ನು ಎಲ್ಲಾ ಆಯಾಮ ಗಳೊಂದಿಗೆ ಕಟ್ಟಿಕೊಡಲು ಸಮರ್ಥವಾಗುತ್ತದೆಯೇ ಎಂಬ ಪ್ರಶ್ನೆ ನಮಗೆ ಎದುರಾಗುತ್ತದೆ. ರಾಜಕೀಯ / ಸಾಂಸ್ಕೃತಿಕ / ಆರ್ಥಿಕ / ಸಾಮಾಜಿಕ ಆಯಾಮಗಳು ಒಂದಕ್ಕೊಂದು ಪೂರಕವಾಗಿ ಒಂದು ಸಿದ್ಧಾಂತಕ್ಕೆ ನೆಲೆ ಒದಗಿಸಬೇಕು. ಸಿರಿ ಅಧಿಕಾರದ ಪ್ರಶ್ನೆ ಮಾಡುತ್ತಾಳೆ, ಆಸ್ತಿಯ ಬಗ್ಗೆ ಪ್ರಶ್ನೆ ಎತ್ತುತ್ತಾಳೆ, ಗಂಡನಿಗೆ ತನ್ನ ಮೇಲೆ ಅಧಿಕಾರ ನೀಡುವ ಮೈ ಮೇಲಿನ ಕುರುಹುಗಳನ್ನು ತೆಗೆಯುತ್ತಾಳೆ, ಗಂಡನನ್ನು ತ್ಯಜಿಸುತ್ತಾಳೆ, ಸೂಳೆಯ ಬಗ್ಗೆ ಸಿಡುಕುತ್ತಾಳೆ, ಮಗನನ್ನು ತ್ಯಜಿಸಿ ಮರುಮದುವೆಯಾಗುತ್ತಾಳೆ. ಸರಿ, ಒಬ್ಬ ಮಹಿಳೆಯ ಅಂತಃಶಕ್ತಿಗೆ ಈಕೆ ಪೂರಕವೇ. ಅಕ್ಕ ಮಹಾದೇವಿ ಕೂಡಾ ಒಂದು ಶಕ್ತಿಯ ನೆಲೆಯೇ. ಆದರೆ ಈ ರೀತಿಯ ವೈಯಕ್ತಿಕ ನೆಲೆಯ ಪ್ರಶ್ನೆಗಳು ಚಳುವಳಿಯ, ಸಮುದಾಯದ ಹೋರಾಟದಲ್ಲಿ ಮೂರ್ತಗೊಳ್ಳಬೇಕು. ನಮ್ಮಲ್ಲಿ ಸಿರಿಯಂತಹ ಆಸ್ತಿವಂತ ರಾಜಕುಮಾರಿಯರು ಮಾತ್ರವಿಲ್ಲ, ಅಕ್ಕನಂತಹ ಆಧ್ಯಾತ್ಮಿಕ ಜ್ಞಾನಿಗಳು ಮಾತ್ರವಿಲ್ಲ. ಏನೂ ಇರದ, ಮುಖವಿರದ ಹೆಣ್ಣುಗಳಿದ್ದಾರೆ. ಮೌಖಿಕ ಸಂಸ್ಕೃತಿಯ ಸಿರಿ - ಸೂಳೆ ಸಿದ್ದು ಉಟ್ಟ ಸೀರೆ ಎಂದು ದೂರ ಸರಿಸ ಬಿಡುತ್ತಾಳೆ. ಸ್ತ್ರೀವಾದ ಸಿದ್ದುವನ್ನು ಪ್ರೀತಿಸುತ್ತದೆ, ಸಹಿಸಿಕೊಳ್ಳುತ್ತದೆ. ಆಕೆಯ ಬದುಕು ಆಕೆಯಿಂದಲೇ ನಿರ್ಣಯವಾದುದಲ್ಲ ಎನ್ನುತ್ತದೆ. ಸಿರಿ ಕೂಡಾ ಮರುಮದುವೆಯಲ್ಲಿ ಇನ್ನೊಬ್ಬನಿಗೆ ಎರಡನೆಯ ಹೆಂಡತಿಯಾಗಿಯೇ ಹೋಗುತ್ತಾಳೆ. ಇನ್ನೊಬ್ಬ ಹೆಣ್ಣಿಗೆ ಎದುರಾಗಿಯೇ ನಿಲ್ಲುತ್ತಾಳೆ ಸಿದ್ದು/ಸಿರಿ ಎಲ್ಲೋ ಒಂದೇ ನಾಣ್ಯದ ಎರಡು ಮುಖಗಳೇ ಆಗಿಬಿಡುತ್ತಾರೆ. ಸಿರಿ

ಇನ್ನೊಬ್ಬನೊಡನೆ ಬದುಕಲು ನಿರ್ಧರಿಸಿದ ಮಾತ್ರಕ್ಕೆ ಸಿರಿಯ ಪ್ರಶ್ನೆ / ಸವಾಲಿಗೆ ಉತ್ತರ ಸಿಕ್ಕಂತಲ್ಲ ಎನ್ನುತ್ತದೆ ಸ್ತ್ರೀವಾದ. ಸಿರಿಯನ್ನು ಒಪ್ಪಿಯೂ ಸಿರಿಯ attitudeನ್ನು ಸ್ತ್ರೀವಾದ ಪ್ರಶ್ನಿಸುತ್ತದೆ. ಅಂದರೆ ಒಂದು ಪರಿಮಿತಿಯಲ್ಲಿ ಸಿರಿ ನಮ್ಮ ಹೋರಾಟಕ್ಕೆ ಪ್ರೇರಣೆಯಾಗುತ್ತಾಳೆ. ಆದರೆ ಅಲ್ಲಿ ಹಲವಾರು ಪ್ರಶ್ನೆಗಳಿವೆ. ಈಕೆ- ಸಿದ್ದು ಎದುರಾಗಿ ನಿಂತ ಹಾಗೆ, ಎರಡನೇ ಮದುವೆಯಾಗುವ ಈಕೆ ಇನ್ನಾವ ಸ್ತ್ರೀಗೋ ಎದುರಾಗಿ ನಿಲ್ಲುತ್ತಾಳೆ. ಈ ಬಗ್ಗೆ ಸಿರಿಯ ಕತೆ ಬೆಳಕು ಚೆಲ್ಲುವುದಿಲ್ಲ. ಈ ವಿಡಂಬನೆಯನ್ನು ಎತ್ತಿ ಹಿಡಿದೇ ಸ್ತ್ರೀವಾದ ಮಾತನಾಡುತ್ತದೆ.

ಪಶ್ಚಿಮದ ಸ್ತ್ರೀವಾದ ಸಿದ್ಧಾಂತವಾಗಿ ಮಂಡಿಸುತ್ತಿರುವ ನಿಲುವಿಗೂ, ನಮ್ಮ ನೆಲದ ಹೆಣ್ಣಿನ ಬದುಕಿಗೂ ವೈರುಧ್ಯವಿದೆ ಎಂಬ ನಿಲುವನ್ನು ಗಾಯತ್ರಿ ನಾವಡರವರು ಅನೇಕ ಸಂದರ್ಭಗಳಲ್ಲಿ 'ವಿರಚನೆ' ಕೃತಿಯಲ್ಲಿ ಎತ್ತಿ ಹಿಡಿಯುತ್ತಾರೆ. ೭೫ರಿಂದೀಚೆಗೆ ಮಹಿಳ ಚಳುವಳಿ ಹೋರಾಡಿದ ಅನೇಕ ಸಮಸ್ಯೆಗಳ ಸುತ್ತ ಇಂದು ಹಲವಾರು ಬದಲಾವಣೆಗಳಾಗಿವೆ. ವರದಕ್ಷಿಣೆ, ಅತ್ಯಾಚಾರ, ವಿಚ್ಛೇದನ, ಕೌಟುಂಬಿಕ ಹಿಂಸೆ, ಸತಿದಹನ ಪಾಶ್ಚಾತ್ಯರ ಸಮಸ್ಯೆಗಳೇ? 75ರಿಂದ ಬೀದಿಗಿಳಿದು ಹೋರಾಡಿದ ಮಹಿಳಾ ಚಳುವಳಿಯ ಧ್ವನಿಗೆ ಪೂರಕವಾಗಿ ಇಂದು ಮಹಿಳಾ ಅಧ್ಯಯನ ಕೇಂದ್ರಗಳು ತಲೆಯೆತ್ತಿ ನಿಂತಿವೆ. ಮಥುರಾ ಪೋಲೀಸ್ ಅತ್ಯಾಚಾರ ಪ್ರಕರಣ ದಿಂದ ಹಿಡಿದು ಬನ್ವರಿದೇವಿಯ ಅತ್ಯಾಚಾರದವರೆಗೂ ಮಹಿಳಾ ಚಳುವಳಿ ಧ್ವನಿಯೆತ್ತಿದ ಕಾರಣಕ್ಕಾಗಿ ಇಂದು ಅತ್ಯಾಚಾರಕ್ಕೆ ಸಂಬಂಧಿಸಿದ ಹಲವಾರು ಕಾನೂನುಗಳಲ್ಲಿ ಬದಲಾವಣೆಗಳಾಗಿವೆ. ಕೆಲಸದ ಸ್ಥಳದಲ್ಲಿ ನಡೆಯುವ ಕಿರುಕುಳ ನಿಲ್ಲಿಸಲು ಸುಪ್ರೀಂ ಕೋರ್ಟ್ ಅನೇಕ ವಿಧೇಯಕಗಳನ್ನು ಜಾರಿಗೆ ತಂದು ಕಾನೂನು ಮಾಡಲು ಹವಣಿಸುತ್ತಿದೆ. ಸ್ತ್ರೀವಾದಿ ಅಧ್ಯಯನ ಕೇಂದ್ರಗಳು ಚಳುವಳಿಯ ಹಿನ್ನೆಲೆಯಲ್ಲಿ ಮೂಡಿ ಬಂದವುಗಳು ಎಂಬುದನ್ನು ನಾವು ಮರೆಯಬಾರದು. ಗಾಯತ್ರಿ ನಾವಡರಂತಹ ಅಕ್ಯಾಡಮಿಕ್ ಆಗಿರುವಂತಹ ಮಹಿಳೆಯರು ಚಳುವಳಿಯ ಜೊತೆ ನೇರ ಸಂಪರ್ಕವನ್ನು ಹೊಂದಿರದೇ ಚಳುವಳಿ, ಸ್ತ್ರೀವಾದದ ತಾತ್ವಿಕತೆಯ ಬಗ್ಗೆ ತಮ್ಮದೇ ಸಿದ್ಧಾಂತ ರೂಪಿಸಬಿಡುತ್ತಾರೆ. ಚಳುವಳಿ ಹಾಗು ಅದರೊಳಗಿನ ಡೈನಮಿಕ್ಸ್ ಅರ್ಥಮಾಡಿಕೊಳ್ಳುವುದೂ ಕೂಡಾ ಇಂತಹವರಿಗೆ ಬೇಡವಾಗಿರುತ್ತದೆ.

ಈ ಪ್ರಶ್ನೆ ಚಳುವಳಿ ಹಾಗೂ ಬರಹಗಳಿಗಿರಬೇಕಾದ ಸಂಬಂಧಗಳನ್ನೂ ಸಹ ಗಂಭೀರವಾಗಿ ಅರಿತುಕೊಳ್ಳಲು ಪ್ರೇರೇಪಿಸುತ್ತಿದೆ. ಚಳುವಳಿಯ ಜೊತೆ ಸಂಬಂಧವಿರುವ ಕೃತಿಗಳಲ್ಲಿ ಕಾಣುವ ಸ್ತ್ರೀವಾದಿ ತಾತ್ವಿಕತೆಯ ಹರವುಗಳು ಇತರರ ಕೃತಿಗಳಲ್ಲಿ ಕಾಣುವುದಿಲ್ಲ. ಹೀಗಾಗಿಯೇ ಚಳುವಳಿಯ ಜೊತೆ ಸಂಬಂಧ ವಿರುವ ಲೇಖಕಿಯರಲ್ಲಿ ಒಂದು ರಾಜಕೀಯ ದಾರ್ಶನಿಕತೆ ಕಂಡುಬರುತ್ತದೆ. 'ವಿರಚನೆ' ಇಡಿಯ ಕೃತಿಯ ಸಂಸ್ಕೃತಿಯ ಅಧ್ಯಯನದಲ್ಲೂ ಕೂಡಾ ಮುಖ್ಯವಾಗಬೇಕಾಗಿದ್ದ ರಾಜಕೀಯ, ಆರ್ಥಿಕ ಶೋಷಣೆಯ ಆಯಾಮಗಳು ಪೂರ್ಣವಾಗಿ ಕಾಣೆ ಯಾಗಿದೆ. ಉತ್ಪಾದನಾ ಸಂಬಂಧಗಳ ತಳಹದಿಯನ್ನಂತೂ ಯಾವ ಕತೆಗಳ ಹಿನ್ನಲೆಯಲ್ಲೂ ಅಧ್ಯಯನ ನಡೆಸುವುದೇ ಇಲ್ಲ. ಹಾಗಾಗಿ ಗಾಯತ್ರಿಯವರು 'ವಿರಚನೆ'ಯಲ್ಲಿನ ಮೌಖಿಕ ಸಂಸ್ಕೃತಿಯ ಅಧ್ಯಯನ ವೈಯಕ್ತಿಕ ವಿರೋಧ, ಸ್ವಾಯತ್ತ ಶಕ್ತಿಯನ್ನು ಗುರುತಿಸುವುದು ಮಾತ್ರವಾಗಿ - ಒಂದು ಸಮಗ್ರ ನೋಟವಿರದೆ ಅಪರಿಪೂರ್ಣ ಅಧ್ಯಯನವಾಗಿ ಮಾತ್ರ ಕಂಡುಬರುತ್ತದೆ. ಉತ್ಪಾದನಾ ಮಾದರಿಗಳಲ್ಲಿ ಹೆಣ್ಣು ಅದೃಶ್ಯಳಾಗುವ ಬಗೆಯನ್ನಂತೂ ಇವರು ಬಿಚ್ಚಿಡುವ ತುಳು ಸಂಸ್ಕೃತಿಯ ಮಾನಿಗ, ಕಲ್ಲುರ್ಟಿ, ನಾಗಸಿರಿ, ಸಿರಿ ಪಾಡ್ದನಗಳು ಮಾತನಾಡುವುದೇ ಇಲ್ಲ. ಈ ಕತೆಗಳು ವೈಯಕ್ತಿಕ ನೆಲೆಯಲ್ಲಿಯ ಹುಡುಕಾಟದ ಉತ್ತರ ಗಳಾಗುತ್ತವೆಯೇ ಹೊರತು ಇಡಿಯ ಚಳುವಳಿಗೆ ಒಂದು ತಾತ್ವಿಕ ಚೌಕಟ್ಟನ್ನು ಕಟ್ಟಿಕೊಡಲು ಅಸಮರ್ಥವಾಗುತ್ತವೆ. ಹಾಗಾಗಿ ಗಾಯತ್ರಿಯವರು ಹೇಳುವ ''ಜನಪದ ಕಲೆಗಳಲ್ಲಿ ತೆರೆದುಕೊಳ್ಳುವ ಹೆಣ್ಣಿನ ಜಗತ್ತು ತುಂಬ ಶಕ್ತಿಶಾಲಿಯಾದುದು, ಶ್ರೀಮಂತವಾದುದು, ಹೆಣ್ಣಿನ ಬಿಡುಗಡೆಗೆ ನಾವು ಪಶ್ಚಿಮದ ಕಡೆಗೆ ದೃಷ್ಟಿ ಹರಿಸುವುದಕ್ಕಿಂತ ನಮ್ಮದೇ ಸಾಂಸ್ಕೃತಿಕ ಸಂದರ್ಭದಲ್ಲಿ ಹೆಣ್ಣೊಬ್ಬಳು ತನ್ನ ಲೋಕವನ್ನು ಗ್ರಹಿಸಿದ ಮತ್ತು ಅನನ್ಯತೆಯನ್ನು ಸ್ಥಾಪಿಸಿದ ಕಡೆಗೆ ನಾವೀಗ ನೋಡಬೇಕಾಗಿದೆ. ಹೀಗಾಗಿ ನಮ್ಮ ಸ್ತ್ರೀವಾದಿ ಧೋರಣೆಗಳನ್ನು, ಹೋರಾಟಗಳನ್ನು ನಾವು ಜನಪದ ಸಂಸ್ಕೃತಿ ಯಿಂದ ಕಟ್ಟಿಕೊಳ್ಳಬೇಕಾದ ಅಗತ್ಯ ಬಹಳಷ್ಟಿದೆ ಎನ್ನುವ ಮಾತು ಕುರುಡು ವೈಭವೀಕರಣದ ಮಾತಾಗುತ್ತದೆ. ಮೊದಲೇ ಹೇಳಿದಂತೆ ತಾತ್ವಿಕತೆಯಲ್ಲಿ ರಾಜಕೀಯ / ಸಾಮಾಜಿಕ / ಸಾಂಸ್ಕೃತಿಕ ಈ ಎಲ್ಲಾ ಆಯಾಮಗಳು ಒಂದಕ್ಕೊಂದು ಹೆಣೆದುಕೊಂಡು ಕೆಲಸ ಮಾಡುತ್ತವೆ. ಈ ಒಟ್ಟಾದ ಸಮಗ್ರ ದೃಷ್ಟಿಕೋನವನ್ನು ಒದಗಿಸದೇ ಇವು ಭಾರತೀಯ ಸ್ತ್ರೀವಾದಕ್ಕೆ ತಾತ್ವಿಕ ತಳಹದಿ ಕಟ್ಟಿ ಕೊಡುತ್ತವೆ ಎಂದು ಹೇಳುವುದು ಸೂಡೋ ಕಲ್ಪನೆಯಾಗುತ್ತದೆ.

ಭಾರತೀಯ ಸ್ತ್ರೀವಾದದ ಬಗ್ಗೆ ಹಾಗೂ ಜಾನಪದದ ಶ್ರೀಮಂತಿಕೆಯ ಬಗ್ಗೆ ಮಾತನಾಡುತ್ತಲೇ ಗಾಯತ್ರಿ ನಾವಡರವರು ಇಂದು ಭಾರತೀಯ ಸ್ತ್ರೀವಾದ ಪಶ್ಚಿಮದ ಗಾಳಿಯಾಗಿಯೇ ನಿಂತಿದೆ ಎನ್ನುತ್ತಾರೆ. 'ಸ್ತ್ರೀವಾದದ ಕಲ್ಪನೆ', 'ಭಾರತೀಯ ಸ್ತ್ರೀವಾದದ ತಾತ್ವಿಕತೆ' ಇನ್ನೂ ಹಲವಾರು ಲೇಖನಗಳಲ್ಲಿ ಹಾಗೂ ಆಕರ ಸೂಚಿಗಳಲ್ಲಿ ಪಾಶ್ಚಾತ್ಯ ಲೇಖಕರ / ಲೇಖಕಿಯರ ಪುಸ್ತಕಗಳ ಹೆಸರು, ವ್ಯಾಖ್ಯಾನಗಳು ಹೇರಳವಾಗಿ ಕಂಡುಬರುತ್ತವೆ. ಕ್ಯಾಥರಿನ್ ಮ್ಯಾಕಿನ್, ಕೇಟ್‌ಮಿಲೆಟ್, ಸಿಮನ್ ದಿ ಬುವಾ,

ರೋಸಾಲಿಂಡ್ ಕೊವರ್ಡ್ ಇಂತಹವರ ಹಲವಾರು ವ್ಯಾಖ್ಯಾನಗಳು ಈ ಪುಸ್ತಕದಲ್ಲಿ ದೊರೆಯುತ್ತವೆ. ಸ್ತ್ರೀವಾದದ ಕಲ್ಪನೆಯ ಬಗ್ಗೆ ಬರೆಯುವಾಗ ಅದನ್ನು ಒಪ್ಪಿಕೊಂಡಂತೇ ಬರೆಯುವ ಧ್ವನಿ ಮೊದಲಿನ ಲೇಖನದಲ್ಲಿ ಕಂಡುಬರುತ್ತದೆ. 'ಭಾರತೀಯ ಸ್ತ್ರೀವಾದದ ತಾತ್ವಿಕತೆ' ಎಂಬ ಲೇಖನದಲ್ಲಿ ಇವರು ಬರೆಯುತ್ತಾರೆ, ''ವಿಜ್ಞಾನ, ಸಮಾಜಶಾಸ್ತ್ರ, ಮಾನವಶಾಸ್ತ್ರ ಅಥವಾ ಮಾರ್ಕ್ಸ್ ವಾದವಾಗಲೀ ಅಥವಾ ನವೋದಯ. ನವ್ಯದ ಸಾಹಿತ್ಯ ತತ್ವಗಳಾಗಲೀ ನಾವು ಪಡೆದದ್ದು ಪಶ್ಚಿಮದಿಂದಲೇ. ಈ ಯಾವ ಶಾಸ್ತ್ರ ಅಥವಾ ಸಿದ್ಧಾಂತಕ್ಕೆ ಅಂಟಿಕೊಳ್ಳದ ಅಸ್ಪೃಶ್ಯತೆ / ಅಪವಾದಗಳು ಸ್ತ್ರೀವಾದದ ಮಟ್ಟಿಗೆ ಏಕೆ ಎನ್ನುವ ಪ್ರಶ್ನೆ ಪ್ರಸ್ತುತವಾದದ್ದು'' (ಪು 11). ಹೀಗೆ ಬರೆಯುವ ಇವರು ನಂತರದ ಲೇಖನಗಳಲ್ಲಿ ಸ್ತ್ರೀವಾದ ಪಶ್ಚಿಮದ ಪ್ರೇರಣೆಯಾಗಿಯೇ ನಿಂತಿದೆ ಎಂದು ದೂಷಿಸುತ್ತಾರೆ. ಈ ರೀತಿಯ ವಿರೋಧಾಭಾಸಗಳನ್ನೂ ಕೂಡಾ ನಾವು 'ವಿರಚನೆ'ಯಲ್ಲಿ ಕಾಣಬಹುದಾಗಿದೆ.

ಮಾತೃಪ್ರಧಾನ, ಮಾತೃವಂಶೀಯ ವ್ಯವಸ್ಥೆಯಲ್ಲಿ ಹೆಣ್ಣಿನ ಕೈಯಲ್ಲಿ ಅಧಿಕಾರವಿತ್ತು, ಪ್ರಾಬಲ್ಯವಿತ್ತು ಎಂಬುದನ್ನು ಕೂಡಾ 'ವಿರಚನೆ' ಪ್ರಸ್ತಾಪಿಸುತ್ತದೆ. ಈ ಬಗ್ಗೆಗಿನ ಮಿತಿಗಳೇನೇ ಇರಲಿ - ಮಾತೃವಂಶೀಯ ವ್ಯವಸ್ಥೆಯ ಹೆಣ್ಣಿಗೇ ಇರುವ ಅಧಿಕಾರದ ಬಗ್ಗೆಯೂ ಸ್ತ್ರೀವಾದ ಪ್ರಶ್ನಿಸುತ್ತದೆ. ಗಂಡಿಗಾಗಲೀ ಅಥವಾ ಹೆಣ್ಣಿಗಾಗಲೀ ವಿಶೇಷ ಅಧಿಕಾರ/ಸವಲತ್ತು ನೀಡುವ ವ್ಯವಸ್ಥೆಯ ವಿಷನ್‌ನ್ನು ಸ್ತ್ರೀವಾದಿಗಳು ಹೊಂದಿರುವುದಿಲ್ಲ. ವಧುದಕ್ಷಿಣೆ ನೀಡದೇ ಮದುವೆಯಾದುದಕ್ಕೆ ಗಂಡ ಮಾನಿಗಳ ಕಥೆಯಲ್ಲಿ ಹೀಯಾಳಿಸಲ್ಪಡುತ್ತಾನೆ. ಇಲ್ಲಿ ಹೆಣ್ಣು ಈ ವಿರುದ್ಧ ಹಟ ಮಾಡುತ್ತಾಳೆ, ಹೀಯಾಳಿಸುತ್ತಾಳೆ, ಅವಮಾನಿಸುತ್ತಾಳೆ. ಈ ಮೌಲ್ಯಗಳನ್ನು ಸ್ತ್ರೀವಾದ ಎತ್ತಿ ಹಿಡಿಯುವುದೇ ಇಲ್ಲ, ಎತ್ತಿ ಹಿಡಿಯಬಾರದೂ ಕೂಡಾ. 'ಅಧಿಕಾರ'ದ ಕಲ್ಪನೆಯನ್ನೇ ಹೆಚ್ಚು ಹೆಚ್ಚಾಗಿ ಪ್ರಶ್ನಿಸಿದ ಸ್ತ್ರೀವಾದಿ ಚಳುವಳಿ ಹೆಣ್ಣಿನ ಸ್ವಾಯತ್ತತೆಯ ಬಗ್ಗೆ ಮಾತನಾಡುತ್ತದೆಯೇ ಹೊರತು 'ಅಧಿಕಾರ'ದ ಬಗ್ಗೆ ಅಲ್ಲ. ಮಾತೃ ಪ್ರಧಾನ ಕುಟುಂಬದಲ್ಲಿ ಹೆಣ್ಣಿಗೆ ಪೂರ್ತಿ ಆಳ್ವಿಕೆ ಇದ್ದು, ಗಂಡು ಅಲ್ಲಿ ವಧುದಕ್ಷಿಣೆ ಕೊಡುವಂತಿದ್ದರೆ ಅದೂ ತಪ್ಪೇ ಎಂದು ಸ್ತ್ರೀವಾದ ವಾದಿಸುತ್ತದೆ. ಆಸ್ತಿಯ ಸಮಾನ ಹಂಚಿಕೆ, ಸಮಾನ ಸ್ಥಾನ/ಮಾನ ಇವು ಸ್ತ್ರೀವಾದದ ವಿಷನ್‌ಗಳು.

ಕಲ್ಲುರ್ಟಿ, ಬಾಲೆಮಾನಿಯರು ಅಣ್ಣಂದಿರಿಗಾಗಿ ಸೇಡು ತೀರಿಸಿಕೊಳ್ಳುತ್ತಾರೆ. ಕಲ್ಲುರ್ಟಿ ಅಣ್ಣನಿಗೆ ಹೆಂಗಸರನ್ನು ನೀನು ಕೆಡಿಸು, ಗಂಡಸರನ್ನು ನಾನು ಕೆಡಿಸುತ್ತೇನೆ, ನೀನು ಕಲ್ಲು ಹೊಡಿ, ನಾನು ಬೆಂಕಿ ಹಚ್ಚುತ್ತೇನೆ (ಪುಟ 84) ಎನ್ನುತ್ತಾಳೆ. ಬಾಲೆಮನೆ ಅಣ್ಣನಿಗೆ ಅನ್ಯಾಯ ಮಾಡಿದವರ ವಿರುದ್ಧ ಸೇಡುತೀರಿಸಿಕೊಳ್ಳಲು ಅವನ ಸೋದರ ಸೊಸೆಯನ್ನು ನೀರು ಕೋಳಿ ಮಾಡುತ್ತಾಳೆ. (ಪುಟ 84). ಯಾವುದೇ ಪ್ರಾಧಾನ್ಯತೆಯು. ಈ ರೀತಿಯ ಗ್ರಹಿಕೆಗಳನ್ನು ಹುಟ್ಟು ಹಾಕಿದರೂ ಆ ಪ್ರಾಧಾನ್ಯತೆಯ ವ್ಯವಸ್ಥೆಯನ್ನು ಸ್ತ್ರೀವಾದ ವಿರೋಧಿಸುತ್ತದೆ.

"ಲಿಂಗ ವ್ಯವಸ್ಥೆ'ಯಲ್ಲಿ ಹೆಣ್ಣು ಶೋಷಿತಳು, ದಬಾವಣೆಗೆ ಒಳಗಾದವಳು ಎನ್ನುವುದು ಸ್ತ್ರೀವಾದದ ಜಾಗತಿಕ ಸಮಾನಾಂಶವೂ ಹೌದು. ಲಿಂಗಾಧಾರಿತ ಅಧೀನತೆಯ ಪರಿಕಲ್ಪನೆಗಳು ಆಯಾ ಸಾಂಸ್ಕೃತಿಕ, ಸಾಮಾಜಿಕ ಸಂದರ್ಭದಲ್ಲಿ ಬೇರೆ ಬೇರೆಯಾಗಿರುತ್ತದೆ - ಎನ್ನುವ ಅರಿವು ಅಗತ್ಯ. ಭಾರತೀಯ ಸ್ತ್ರೀವಾದದ ಶೋಧ ಎಂದರೆ ಪಶ್ಚಿಮದ ಸ್ತ್ರೀವಾದವನ್ನು ಇಲ್ಲಿಗೆ ಕಡತಂದು ಕಟ್ಟುವುದಲ್ಲ. ಇಲ್ಲಿನ ಸಂದರ್ಭಕ್ಕೆ ಮುರಿದು ಕಟ್ಟುವಲ್ಲಾಗಬೇಕು. ಅಂದರೆ ಪಶ್ಚಿಮದ ಸಿದ್ಧಾಂತವನ್ನು ಪ್ರೇರಣೆಯಾಗಿ ಸ್ವೀಕರಿಸಿ ಅದರ ಅನ್ವಯಿಕತೆಯಲ್ಲಿ ಅದು ನಮ್ಮ ಮಹಿಳೆಯರ ನಿರ್ದಿಷ್ಟ ಪರಂಪರೆ ಮತ್ತು ಅನುಭವಗಳಿಂದ ರೂಪು ಪಡೆಯಬೇಕಾಗಿದೆ" (ಪು.11)

ಗಾಯತ್ರಿ ನಾವಡರವರು ತಮ್ಮದೇ ಆದ ಈ ಗ್ರಹಿಕೆಗೇ ಬದ್ಧರಾಗಿದ್ದಿದ್ದರೆ ಪ್ರಸ್ತುತದ ಸ್ತ್ರೀವಾದಿ ಚಳುವಳಿ, ಸಾಹಿತ್ಯ ಅಥವಾ ವಿಮರ್ಶೆಗೆ ದೋಷಾರೋಪಗಳನ್ನು ಹೊರಿಸುವ ಅಗತ್ಯವಿರಲಿಲ್ಲ. ಮೊದಲೆರೆಡು, ಮೂರು ಲೇಖನಗಳಲ್ಲಿ ಕಂಡುಬರುವ ಈ ಗ್ರಹಿಕೆ - ನಂತರದಲ್ಲಿ ಮೌಖಿಕ ಸಂಸ್ಕೃತಿಯ ಶ್ರೇಷ್ಠತೆಯನ್ನು ಎತ್ತಿಹಿಡಿಯುವತ್ತ ಹೊರಳುತ್ತದೆ. ಮೌಖಿಕ ತುಳು ಪರಂಪರೆಯ ಸ್ತ್ರೀ ಕಥನಗಳು ಸ್ತ್ರೀವಾದಿ ಸವಾಲುಗಳೆಲ್ಲವಕ್ಕೂ ತಾತ್ವಿಕ ಚೌಕಟ್ಟು ಕಟ್ಟಿಕೊಡುತ್ತವೆ ಎಂಬಂತೆ ಇವರು ಧ್ವನಿಸುತ್ತಾರೆ. ಮೊದಲೇ ಹೇಳಿದ ಹಾಗೆ ಈ ಎಲ್ಲಾ ಸ್ತ್ರೀ ಕಥನಗಳು ಒಂದು ಮಿತಿಯಲ್ಲಿ ಮಾದರಿಗಳಾಗಿ ಕೆಲಸ ಮಾಡಬಹುದೇ ಹೊರತು ಅವುಗಳೇ ಅಂತಿಮವಾದ, ಶ್ರೇಷ್ಠವಾದ ಮಾದರಿಗಳಲ್ಲ. ಸಂಸ್ಕೃತಿಯ ನೆಲೆ- ಹೋರಾಟದ ಒಂದು ಮುಖ, ಇದರ ಜೊತೆ ಸಾಮಾಜಿಕ/ರಾಜಕೀಯ ಇವೆಲ್ಲದರ ದಾರ್ಶನಿಕತೆಗಳು ಒಟ್ಟುಗೂಡಿ ಒಂದು ತಾತ್ವಿಕತೆ ರೂಪಿತಗೊಳ್ಳಬೇಕಾಗುತ್ತದೆ. ಗಾಯತ್ರಿ ನಾವಡರವರ ಮಾತಿನಲ್ಲಿಯೇ ಹೇಳಬೇಕಾದರೆ ............... ವರ್ಗ ತಾತ್ವಿಕತೆಗೆ ಲೈಂಗಿಕ ಆಯಾಮ ಇಲ್ಲ ಎನ್ನುವ ಹಿನ್ನೆಲೆ ಇಟ್ಟುಕೊಂಡು ಸ್ತ್ರೀ ಶೋಷಣೆಯನ್ನು ಬಹು ಅಂಶೀಯ ನೆಲೆಯಲ್ಲಿ ಸ್ತ್ರೀವಾದಿಗಳು ಹುಡುಕುತ್ತಾರೆ. ಲಿಂಗ ಅಸಮಾನತೆಯನ್ನು ಜೈವಿಕತೆ, ಲೈಂಗಿಕತೆ, ಉತ್ಪಾದನಾ ವ್ಯವಸ್ಥೆ, ಸಾಮಾಜಿಕರಣ, ಪಿತೃಪ್ರಧಾನ ಹಾಗೂ ಬಂಡವಾಳಶಾಹಿಗಳೊಂದಿಗೆ ಒಟ್ಟಾಗಿಯೇ ಗ್ರಹಿಸಬೇಕಾಗುತ್ತದೆ'. (ಪು. 4)

'ಮಾನಸ'

# 'ಅಸಹಜ ಸಾವುಗಳು' ಒಂದು ಅಧ್ಯಯನ ವಿಮೋಚನಾ ಮಹಿಳಾ ಹಕ್ಕುಗಳ ವೇದಿಕೆ

*ಬದುಕುವ ಹಕ್ಕಿಗಾಗಿ 'ವಿಮೋಚನಾ' ಹಮ್ಮಿಕೊಂಡ ಆಂದೋಲನದ ಅಂಗವಾಗಿ ಕಳೆದ ವರ್ಷ ಒಂದು ವಿಶಿಷ್ಟವಾದ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಕೌಟುಂಬಿಕ ನೆಲೆಯಲ್ಲಿ ಖಾಸಗೀ ಸ್ವರೂಪದ ಅಮಾನುಷ ಹಿಂಸೆಯ ವಿರುದ್ಧ ಕಾನೂನಿನ ಚೌಕಟ್ಟಿನಲ್ಲಿ ಹೋರಾಡುವ ವಿವಿಧ ಹಂತದಲ್ಲಿ ಕಂಡುಬರುವ ಮಿತಿಗಳನ್ನು ವಿವರವಾಗಿ ಅಧ್ಯಯನ ನಡೆಸಿ ವರದಿಯನ್ನು ಪ್ರಕಟಿಸಲಾಗಿದೆ ಅಸಹಜ ಸಾವುಗಳ ತನಿಖೆಯ ಪ್ರಾಥಮಿಕ ಹಂತದಿಂದ ಪ್ರತಿಯೊಬ್ಬರನ್ನು ಒಳಗೊಂಡು ನಡೆಸಿದ ಈ ಕಾರ್ಯಕ್ರಮದಲ್ಲಿ ಹಲವಾರು ಬೇಡಿಕೆಗಳನ್ನು ಸಹ ಸರ್ಕಾರದ ಮುಂದಿಡಲಾಗಿದೆ ಕೌಟುಂಬಿಕ ನೆಲೆಯ ಹಿಂಸೆಯ ವಿರುದ್ಧ ನಡೆಸುವ ಹೋರಾಟದಲ್ಲಿ ಈ ಬೇಡಿಕೆಗಳು ಬಹು ಮುಖ್ಯವಾದವು*

ಇಪ್ಪತ್ತು ವರ್ಷಗಳ ಮಹಿಳಾ ಚಳುವಳಿಯಿಂದಾಗಿ ಸ್ತ್ರೀಯರು ಇಂದು ಗೋಚರವಾಗಿದ್ದಾರೆ. ಸ್ತ್ರೀಯರ ಬಗೆಗಿನ ಕಾಳಜಿ ಒಂದು ಪ್ರಮುಖ ಅಜೆಂಡಾ ಆಗಿದೆ. ಮಹಿಳಾ ಚಳುವಳಿಯ ಪರಿಣಾಮವಾಗಿ ಸ್ತ್ರೀಯರ ಮೇಲೆ ನಡೆಯುವ ಅಮಾನುಷ ಹಿಂಸೆ ದೌರ್ಜನ್ಯವನ್ನು ತಡೆಯುವ ಉದ್ದೇಶದಿಂದ ರಾಷ್ಟ್ರೀಯ ಹಾಗೂ ರಾಜ್ಯ ಮಹಿಳಾ ಆಯೋಗ ಕೌಟುಂಬಿಕ ನ್ಯಾಯಾಲಯ, ವಿಶೇಷ ನ್ಯಾಯಾಲಯ ರಚಿತವಾಗಿದೆ. ಮಹಿಳೆಯರಿಗೆ ಸಂಬಂಧಪಟ್ಟ ಕಾನೂನುಗಳಲ್ಲಿ ಹಲವಾರು ಬದಲಾವಣೆಗಳು ಆಗಿವೆ. ಇದುವರೆಗೂ ಖಾಸಗೀ, ವೈಯಕ್ತಿಕ ಎಂದು ಕರೆದು ಮುಚ್ಚಿಡಲ್ಪಟ್ಟ ಮಹಿಳಾ ಸಮಸ್ಯೆಯ ವಿವಿಧ ಮುಖಗಳು ಇಂದು ಸಾರ್ವಜನಿಕ ಸ್ವರೂಪವನ್ನು ಪಡೆದಿದೆ. ಸ್ತ್ರೀಯರ ಮೇಲೆ ನಡೆಸಲಾಗುವ ದೈಹಿಕ ಹಿಂಸೆ, ಹಾಗೂ ಮಾನಸಿಕ ಕಿರುಕುಳಗಳು ಇಂದು ಅಪರಾಧವೆಂದು ಪರಿಗಣಿತವಾಗಿವೆ.

ಈ ಎರಡು ದಶಕದಲ್ಲಿ ಸಾಕಷ್ಟು ಅರಿವು, ತಿಳುವಳಿಕೆ ಮೂಡಿದ್ದರೂ, ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯ ಪ್ರಮಾಣ ಕಡಿಮೆಯಾಗಿಲ್ಲವೇಕೆ? ಘರ್ಷಣೆಗಳಾದ ಸಂದರ್ಭಗಳಲ್ಲೆಲ್ಲಾ ಸ್ತ್ರೀಯರು ಏಕೆ ಹಿಂಸೆಯ ಬಲಿಪಶುಗಳಾಗುತ್ತಿದ್ದಾರೆ? ವೈವಾಹಿಕ ಕುಟುಂಬ ಜೀವನದಲ್ಲಿ ಅವಳನ್ನು ಒಡೆದು ಚೂರು ಚೂರು ಮಾಡುತ್ತಿದ್ದರೂ, ವರದಕ್ಷಿಣೆಗಾಗಿ ನಡೆಯುವ ಕಿರುಕುಳಕ್ಕೆ ಅಮಾನುಷವಾಗಿ ಎಳೆಯ ಬಾಲಕಿಯರು ಬಲಿಯಾಗುತ್ತಿದ್ದರೂ ವಿವಾಹ ಸಂಸ್ಥೆಯನ್ನು ಬಲಪಡಿಸಲಾಗುತ್ತಿದೆ.

ನಮ್ಮ ಅಧ್ಯಯನದ ಮೂಲಕ ಕಂಡುಬಂದ ಆಘಾತಕಾರಿ ಅಂಶವೆಂದರೆ, ಆತ್ಮಹತ್ಯೆ ಮಾಡಿಕೊಂಡ, ಕೊಲೆಯಾದ ಬಹುಪಾಲು ಪ್ರಕರಣಗಳು 'ಅಡಿಗೆಯ' ಮನೆಯ ಸಾವುಗಳೆಂದು ದಾಖಲಾಗಿರುವುದು. ಬೆಂಗಳೂರಿನಲ್ಲಿ ಜನವರಿ 97 ರಿಂದ ಸೆಪ್ಟೆಂಬರ್ 98 ರವರೆಗೆ, ವಿವಿಧ ಪೋಲೀಸ್ ಠಾಣೆಗಳಲ್ಲಿ ದಾಖಲಾಗಿರುವ ಅಸಹಜ ಸಾವಿನ ಸಂಖ್ಯೆ - 550. ಇದು ವಾಸ್ತವ ಅಂಕಿ ಅಂಶಗಳನ್ನು ಪ್ರತಿನಿಧಿಸುವುದಿಲ್ಲ. ವಾಸ್ತವವಾಗಿ ಈ ಅಂಕಿ ಅಂಶದಲ್ಲಿ ಇನ್ನೂ ಹೆಚ್ಚಳ ಕಂಡುಬರುತ್ತದೆ. 550 ದಾಖಲಾದ ಕೇಸುಗಳಲ್ಲಿ ಶೇ 71% ರಷ್ಟು ಕೇಸುಗಳು 174 ಸಿ.ಆರ್.ಪಿ.ಸಿ. ಅಡಿಯಲ್ಲಿ ಅಂದರೆ, ಅಡಿಗೆ ಮಾಡುವಾಗ ಸ್ಟೌವ್ ಸಿಡಿದು ಉಂಟಾದ ಅಪಘಾತಗಳೆಂದು ದಾಖಲಾಗಿದೆ. ಇವುಗಳನ್ನು ಆಳವಾಗಿ ಪರಿಶೀಲನೆ ಮಾಡಿದಾಗ, ಅತ್ತೆ ಮಾವಂದಿರು ನೀಡಿದ ಹೇಳಿಕೆ, ತಂದೆ ತಾಯಿಯರ ಹೇಳಿಕೆಯಿಂದಾಗಿ ಸಾಕಷ್ಟು ವೈವಿಧ್ಯಮಯ ಅಂಶಗಳು ಕಂಡುಬರುತ್ತವೆ. ಎಲ್ಲಾ ಅಪಘಾತಗಳ ಹಿಂದೆ ಕಿರುಕುಳ, ಹಿಂಸೆಯ ಚರಿತ್ರೆ ಅಡಗಿದೆ. ಪೋಲೀಸ್ ವಿಚಾರಣೆಯ ಸಂದರ್ಭದಲ್ಲಿ ಬೆಳಕಿಗೆ ಬರದ ಮೂಕರೋದನೆಯ ಕತೆ ಮೌನದಲ್ಲಿ ಹುದುಗಿದೆ.

ಹದಿಹರೆಯದ ಹುಡಿಗಿಯರು ಏಕೆ ಸತ್ತರು? ಅವರ ದುರಂತಮಯ ಸಾವಿಗೆ ಕಾರಣವಾದರೂ ಏನು? ಇವು ಪ್ರಶ್ನೆಗಳಾಗಿಯೇ ಉಳಿಯುತ್ತವೆ.

ಕುಟುಂಬದಲ್ಲಿ ಸ್ತ್ರೀಯರ ಮೇಲೆ ನಡೆಯುತ್ತಿರುವ ಅಮಾನುಷ ಹಿಂಸೆಗೆ ಸಾಮಾಜಿಕ ಕಾರಣಗಳೊಂದಿಗೆ ಮದುವೆಯಾದ ಹುಡುಗಿಯರ ಸಾವಿಗೆ ಆಡಳಿತಾತ್ಮಕ ಹಾಗೂ ಕಾನೂನಿನ ಪ್ರಕ್ರಿಯೆಯೂ ಕಾರಣವಾಗುತ್ತದೆ. ಅಧಿಕಾರಶಾಹಿಯ ಕಾರಣದಿಂದಾಗಿ ಅಪರಾಧಿಗಳು ಅಪರಾಧದಿಂದ ತಪ್ಪಿಸಿ ಕೊಳ್ಳುತ್ತಿದ್ದಾರೆ. ಇದು ನಾವು ಯೋಚಿಸಬೇಕಾದ ಪ್ರಮುಖ ಅಂಶವಾಗಿದೆ. ಇದು ಒಂದು ಕೇಸನ್ನು ದಾಖಲು ಮಾಡುವ ಪ್ರಾಥಮಿಕ ಹಂತದಿಂದ ಶಿಕ್ಷೆ ನೀಡುವ ಹಂತದವರೆಗೂ ಅನ್ವಯವಾಗುತ್ತದೆ.

### ದೂರನ್ನು ದಾಖಲಿಸುವುದು

ನಮ್ಮ ತನಿಖೆಯ ಮೂಲಕ ಕಂಡುಬಂದ ಬಹುಮುಖ್ಯ ಅಂಶವೆಂದರೆ ಅಸಹಜ ಸಾವುಗಳ ಪ್ರಕರಣಗಳನ್ನು ಸಹಜ ಸಾವುಗಳೆಂದು ಮಧ್ಯಮ ವರ್ಗದ ಕುಟುಂಬದವರು ತಮಗಿರುವ ಹಣ ಹಾಗೂ ಇತರೇ ಪ್ರಭಾವಗಳನ್ನು ಬಳಸಿ ವೈದ್ಯರಿಂದ ತಮಗೆ ಬೇಕೆನಿಸುವ ವರದಿಯನ್ನು ಪಡೆಯುತ್ತಾರೆ.

ಬಹಳಷ್ಟು ಅಸಹಜ ಸಾವುಗಳನ್ನು ಹೊಟ್ಟೆನೋವು ದೆವ್ವಹಿಡಿದಿರುವರು, ಸ್ಟೌವ್ ಸಿಡಿದ ಮುಂತಾದ ಕಾರಣಗಳಿಂದ ಉಂಟಾದ ಸಾವುಗಳೆಂದು ದಾಖಲಿಸಲಾಗುತ್ತದೆ. ಇದಕ್ಕೆ ಹಲವಾರು ಕಾರಣಗಳನ್ನು ನೋಡಬಹುದು. ತಂದೆ ತಾಯಿಯರು ಕಾನೂನಿನ ನೆರವನ್ನು ಪಡೆಯಲು ಹಿಂಜರಿಯುತ್ತಾರೆ. ಸತ್ತಿರುವ ಮಗಳು

ಪುನಃ ವಾಪಸ್ಸು ಬರುತ್ತಾಳೆಯೇ ಎಂದು ತಮ್ಮ ಹಣೆಬರಹವನ್ನು ಹಳಿದುಕೊಳ್ಳುತ್ತಾ ಸುಮ್ಮನಾಗುತ್ತಾರೆ. ತಮ್ಮ ಜನಾಂಗದ ಹಿರಿಯರ ಉಪದೇಶ, ಆಪಾದಿತರ ಒತ್ತಡ ಭಯದಿಂದಲೂ ಕೆಲವರು ಮೌನವಾಗಿ ಬಿಡುತ್ತಾರೆ. ಇನ್ನು ಕೆಲವೊಮ್ಮೆ ಆರೋಪಿ ಹತ್ತಿರದ ಸಂಬಂಧಿಯೇಆಗಿರುತ್ತಾನೆ. ಪೋಲೀಸ್, ಕೋರ್ಟ್ ಕಛೇರಿಗಳ ಕಾರ್ಯವೈಕರಿಯ ಬಗ್ಗೆಯಿರುವ ಅಸಹನೆಯಿಂದಾಗಿ ಕೆಲವೊಮ್ಮೆ ಹಿಂಜರಿಯುತ್ತಾರೆ.

ಕಾನೂನು ಕ್ರಮಕ್ಕೆಗೊಳ್ಳುವ ಪ್ರಕ್ರಿಯೆಯಲ್ಲಿ ಎಫ್.ಐ.ಆರ್ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಶೇ 70%ರಷ್ಟು ಸಾವುಗಳನ್ನು ಆತ್ಮಹತ್ಯೆಯೆಂದು ದಾಖಲಿಸಲಾಗುತ್ತದೆ. "ಹಾಲು ಕಾಯಿಸುವಾಗ ಸೊಸೆಯ ಸೀರೆಗೆ ಬೆಂಕಿ ತಗುಲಿತು" ಎಂಬುದು ಬಹುಸಾಮಾನ್ಯವಾದ 'ಹೇಳಿಕೆ'ಯಾಗಿದೆ. "ಸ್ಟೌಸಿಡಿದು ಉಂಟಾದ ಸಾವು" ಎಂದು ದೂರು ದಾಖಲಿಸಿದ್ದರೂ. ಸಿಡಿದ ಸ್ಟೌವನ್ನು ವಶಪಡಿಸಿದ ನಿದರ್ಶನಗಳಿಲ್ಲ. ಕೆಲವು ಸಂದರ್ಭದಲ್ಲಿ ಆ ಸ್ಥಳದಲ್ಲಿ ಸ್ಟೌಗಳೇ ಇರುವುದಿಲ್ಲ.

ಸುಟ್ಟ ಸಾವುಗಳೊಂದಿಗೆ, ನೇಣು ಹಾಕಿಕೊಂಡು ಸಾಯುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಂತಹ ಸಾವುಗಳನ್ನು ಸಹ ಆತ್ಮಹತ್ಯೆಯೆಂದು ಪರಿಗಣಿಸಲಾಗುತ್ತದೆ. ಇಂತಹ ಸಾವುಗಳನ್ನು ನಾವು ವಿವರವಾಗಿ ಪರಿಶೀಲನೆ ಮಾಡಿದಾಗ ನೇಣುಹಾಕಿಕೊಂಡ ವ್ಯಕ್ತಿಯ ಸಾವು ಸಹಜ ಸಾವಾಗಿರುವುದಿಲ್ಲ. ಆಕೆಯನ್ನು ಕುತ್ತಿಗೆ ಹಿಚುಕಿಯೋ, ಹೊಡೆದೋ ಸಾಯಿಸಲಾಗಿರುತ್ತದೆ. ನಂತರ ಅವಳೆ ನೇಣು ಹಾಕಿಕೊಂಡಂತೆ ಕಾಣುವಂತೆ ನೇಣುಹಾಕಲಾಗುತ್ತದೆ. ಅವಳನ್ನು ಆಸ್ಪತ್ರೆಗೆ ಕರೆದು ಕೊಂಡು ಹೋಗುವ ನೆಪದಲ್ಲಿ ಪೋಲೀಸರು ಆ ಸ್ಥಳಕ್ಕೆ ಬರುವ ಮೊದಲೇ ದೇಹವನ್ನು ಕೆಳಗೆ ಇಳಿಸಲಾಗುತ್ತದೆ. ಇತ್ತೀಚೆಗೆ ಇಂತಹ ಒಂದು ಪ್ರಕರಣದಲ್ಲಿ ಗಂಡ ಹೆಂಡತಿಯನ್ನು ಕ್ರೂರವಾಗಿ ಹೊಡೆದು ಹಿಂಸಿಸಿದ ಪರಿಣಾಮವಾಗಿ ಆಕೆ ಪ್ರಜ್ಞಾಹೀನಳಾಗುತ್ತಾಳೆ. ಅವಳು ಸತ್ತಿದ್ದಾಳೆಂದು ಭಾವಿಸಿದ ಗಂಡ, ಆಕೆಯ ದೇಹವನ್ನು ಮಹಡಿಯಿಂದ ಕೆಳಗೆಳೆದುಕೊಂಡು ಬಂದು, ಆತ್ಮಹತ್ಯೆ ಮಾಡಿಕೊಂಡಿದ್ದಾಳೆಂದು ತೋರಿಸುವ ಉದ್ದೇಶದಿಂದ ಫ್ಯಾನ್‌ಗೆ ನೇತುಹಾಕಿದ. ಸತ್ತಿರದ ಅವಳು ನೇಣುಹಾಕಿದ್ದರಿಂದ ಮರಣ ಹೊಂದಿದಳು "ಉಸಿರು ಕಟ್ಟಿದ ಪ್ರಯುಕ್ತ ಉಂಟಾದ ಸಾವೆಂದು" ಪೋಸ್ಟ್‌ಮಾರ್ಟಂ ವರದಿ ಹೇಳಿತು. ಅಮಾನುಷವಾದ ಕೊಲೆಯನ್ನು ಹೀಗೆ ಮುಚ್ಚಿಡಲಾಯಿತು.

ಆದುದರಿಂದ ಹಿಂಸೆಯ ಸಾಂದರ್ಭಿಕ ಅಂಶಗಳು, ಆರೋಪಿಯ ನಡತೆ, ಉದ್ದೇಶಪೂರ್ವಕವಾಗಿ ನೈಜ ಅಂಶಗಳನ್ನು ಮುಚ್ಚಿಡುವುದು, ಘಟನೆಗಳನ್ನು ತಮಗೆ ಬೇಕೆನಿಸುವ ರೀತಿಯಲ್ಲಿ ತಿರುಚುವುದು, ವ್ಯಾಖ್ಯಾನಿಸುವುದು, ಮುಂತಾದವುಗಳು ಆರೋಪವನ್ನು ಸಾಬೀತು ಪಡಿಸುವಲ್ಲಿ ಬಹುಮುಖ್ಯ ಸುಳಿವು ಹಾಗೂ ಸಂಬಂಧವನ್ನು ಕಲ್ಪಿಸುತ್ತವೆ.

ಅಸಹಜ ಸಾವುಗಳು ವರದಿಯಾದಾಗ, ಒಬ್ಬ ಉನ್ನತ ಅಧಿಕಾರಿಯನ್ನು ಏಕೆ ತನಿಖೆಗಾಗಿ ನೇಮಿಸಲಾಗುತ್ತಿಲ್ಲ? ಹೆಡ್ ಕಾನ್‌ಸ್ಟಬಲ್ ಅಥವಾ ASIಯನ್ನು ಮೊದಲು ಸ್ಥಳ ಪರೀಕ್ಷೆಗಾಗಿ ಕಳಿಸಲಾಗುತ್ತದೆ. ಪ್ರಾಥಮಿಕ ವಿಚಾರಣ ಹಂತದಲ್ಲಿಯೇ, ಅಪರಾಧವನ್ನು ಎಸಗಿದ ಸಂದರ್ಭಕ್ಕೆ ಸಂಬಂಧಪಟ್ಟ ವಸ್ತುಗಳನ್ನು ಏಕೆ ವಶಪಡಿಸಿಕೊಂಡಿರುವುದಿಲ್ಲ? ಬಹುಪಾಲು ಸಂದರ್ಭದಲ್ಲಿ ಮುಖ್ಯ ಸಾಕ್ಷಿಗಳಾಗಬಹುದಾದ, ಸುಟ್ಟ ಬಟ್ಟೆ, ಡೈರಿ, ಕಾಗದ, ಚಿಕ್ಕಚೀಟಿಗಳು, ಸ್ಟೌವ್, ಚಿಕ್ಕ ಪುಟ್ಟ ಆಯುಧಗಳು ಮುಂತಾದವುಗಳನ್ನು ಉದ್ದೇಶಪೂರ್ವಕವಾಗಿ ಅಥವಾ ಬೇಜವಾಬ್ದಾರಿಯಿಂದ ನಾಶಪಡಿಸಲಾಗುತ್ತದೆ. ಪೋಲೀಸರು ಆರೋಪಿಯೊಂದಿಗೆ ಶಾಮೀಲಾಗಿ ಸಾಕ್ಷಿಗಳನ್ನು ನಾಶಪಡಿಸುವಲ್ಲಿ ನೆರವಾಗವ ನಿದರ್ಶನಗಳು ವಿಫುಲವಾಗಿ ದೊರೆಯುತ್ತವೆ.

1997 ಮೇ ತಿಂಗಳಲ್ಲಿ ಬ್ಯಾಟರಾಯನಪುರ ಪೋಲೀಸ್ ಠಾಣೆ ವ್ಯಾಪ್ತಿಯಲ್ಲಿ ಸುರೇಶ್‌ರಾವ್‌ರವರ ಹೆಂಡತಿಯನ್ನು ಅಮಾನುಷವಾಗಿ ಕೊಲೆಮಾಡಲಾಯಿತು. ಅವಳ ದೇಹದ ಬಳಿ ರಕ್ತಸಿಕ್ತ ಚಾಕುವಾಗಲಿ, ರಕ್ತಸಿಕ್ತ ದೊಣ್ಣೆಯಾಗಲಿ ಕಂಡುಬರಲಿಲ್ಲ. ಅವಳ ಗಂಡನೇ ಅತ್ಯಾಚಾರ ಎಸಗಿ, ಕೊಲೆ ಮಾಡಿದ್ದ. ಅವಳ ದೇಹದ ಮೇಲೆ ಕಾಣುವಂತಹ ಗುರುತುಗಳಿದ್ದರೂ, ಅವಳ ಸಾವು 'ಆಘಾತ'ದಿಂದ ಉಂಟಾದುದೆಂದು ಪೋಸ್ಟ್‌ಮಾರ್ಟಂ ವರದಿ ಹೇಳಿತು. ಬ್ಯಾಟರಾಯನಪುರದ ಹೇಮಲಾತಾ (ಮೇ 97) ಕೆಂಗೇರಿಯ ಭಾಗ್ಯಲಕ್ಷ್ಮಿ (ಜುಲೈ 97) ಮಡಿವಾಳದ ಲಕ್ಷ್ಮಿ (ಆಗಸ್ಟ್ 97) ವಿಲ್ಸನ್ ಗಾರ್ಡನ್‌ನ ನಾಗೀನ್ (ಸೆಪ್ಟೆಂಬರ್ 97) ವಿವೇಕನಗರದ ಎಲಿಜಿಬತ್ (ಜುಲೈ 97), ಇವರ ಮನೆಯವರಿಗೆ ಎಫ್.ಐ.ಆರ್ ಪ್ರತಿಯನ್ನಾಗಲಿ, ದೂರನ್ನು ದಾಖಲಿಸಿರುವ ದಾಖಲಾತಿಯನ್ನಾಗಲಿ ನೀಡದಿರುವುದೇಕೆ? ಸೂಕ್ತವಾದ ವಿಚಾರಣೆಯನ್ನು ನಡೆಸುವ ಮೊದಲೇ ಪೋಲೀಸರು ಏಕೆ ಈ ಪ್ರಕರಣಗಳನ್ನು ಆತ್ಮಹತ್ಯೆಯ ಪ್ರಕರಣಗಳೆಂದು ಪರಿಗಣಿಸುತ್ತಾರೆ?

ನಮ್ಮ ಅಧ್ಯಯನ ಪ್ರಕಾರ ಕಂಡುಬಂದ ಅಂಶವೆಂದರೆ ಪೋಲೀಸ್ ತನಿಖೆಯೆಂದರೆ ನಿಜವಾದ ಅರ್ಥದಲ್ಲಿ ತನಿಖೆಯೇ ಅಲ್ಲ. ಅಸಹಜ ಸಾವಿನಲ್ಲಿ ಕೇವಲ ಹೇಳಿಕೆಗಳನ್ನು ದಾಖಲಿಸಿಕೊಳ್ಳಲಾಗುತ್ತದೆ. ಕನಿಷ್ಠ ಸತ್ಯಾಂಶಗಳನ್ನು ಬೆಳಕಿಗೆ ತರುವ ಆಸಕ್ತಿಯನ್ನು ನಾವು ಕಾಣಲು ಸಾಧ್ಯವಿಲ್ಲ. ವರದಕ್ಷಿಣೆಯ ಪ್ರಕರಣಗಳನ್ನು ವರದಕ್ಷಿಣೆ ವಿರೋಧಿ ಘಟಕ ತೆಗೆದು ಕೊಳ್ಳುವುದರಿಂದ ನಿರ್ದಿಷ್ಟವ್ಯಾಪ್ತಿಗೆ ಬರುವ ಪೋಲೀಸ್ ಠಾಣೆಯ ಅಧಿಕಾರಿಗಳು ಸಾಕ್ಷ್ಯದ ಮುಖ್ಯ ಅಂಶಗಳನ್ನು ಸಂಗ್ರಹಿಸುವಲ್ಲಿ ನಿರ್ಲಕ್ಷ್ಯ ತೋರಿಸುತ್ತಾರೆ. ಸಿ.ಓ.ಡಿ. ಗೆ ಕೇಸನ್ನು ವರ್ಗಾವಣೆ

ಮಾಡುವ ನಿರ್ಧಾರವನ್ನು ತೆಗೆದುಕೊಂಡ ಸಂದರ್ಭದಲ್ಲಿ ಒಂದೆರಡು ದಿನ, ವಾರ, ತಿಂಗಳು ಕಳೆದಿರುತ್ತದೆ. ಈ ವಿಳಂಬದಿಂದಾಗಿ ಆರೋಪಿಯು 'ಸಾಕ್ಷಿ'ಗಳನ್ನು ನಾಶಪಡಿಸಲು, ಹುಡುಗಿಯ ಕಡೆಯವರನ್ನು ಹೆದರಿಸಲು, ಕಾಣೆಯಾಗಲು ನಿರೀಕ್ಷಣಾ ಜಾಮೀನು ಪಡೆಯಲು ಅವಕಾಶವನ್ನು ಕಲ್ಪಿಸಿದಂತಾಗುತ್ತದೆ.

**ಪಂಚನಾಮೆ**

ಸ್ಥಳೀಯ ಪೋಲೀಸರಿಂದ ಹಾಗೂ ಸಿ.ಓ.ಡಿ. ಹಂತದಲ್ಲಿ ನಡೆಯುವ ತನಿಖೆಯ ನಡುವೆ ತಹಶೀಲ್ದಾರರಿಂದ ನಡೆಯುವ ಪಂಚನಾಮೆ ಅಥವಾ ಮಹಜರ್ ಮುಖ್ಯವಾದುದು. ಅಪರಾಧದ ವೈಯಕ್ತಿಕ ಗುಣ ಲಕ್ಷಣಗಳಿಂದಾಗಿ ಪಂಚನಾಮ ವರದಿ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಶಿಕ್ಷೆ ನೀಡುವ ಪ್ರಕ್ರಿಯೆಯಲ್ಲಿ ಪ್ರಮುಖ ಅಡಿಗಲ್ಲನ್ನು ಹಾಕುತ್ತದೆ. ತಹಶೀಲ್ದಾರರು ಘಟನೆ ನಡೆದ ಸ್ಥಳಕ್ಕೆ ಕಡ್ಡಾಯವಾಗಿ ಭೇಟಿಯಾಗಬೇಕು. ಹುಡುಗಿಯ ತಂದೆ ತಾಯಿಯಂದಿರಿಂದ ಹೇಳಿಕೆ ಪಡೆಯುವುದು ಹಿಂಸೆಯ ಚರಿತ್ರೆ, ದೇಹದ ಪರೀಕ್ಷೆ ಮುಂತಾದವುಗಳನ್ನು ಕುರಿತು ಮಾಹಿತಿಯನ್ನು ಸಂಗ್ರಹಿಸಬೇಕಾಗುತ್ತದೆ. ಆದರೆ ತಹಶೀಲ್ದಾರರು ದೇಹದ ಮೇಲಿರುವ ಗುರುತುಗಳಿಗೆ ಸಂಬಂಧಪಟ್ಟ ಮಾಹಿತಿಯನ್ನು ಪಡೆಯಲು ಹಿಂಜರಿಯುತ್ತಾರೆ. ಬಲಿಪಶುಗಳಾದ ಸ್ತ್ರೀಯರ ದೇಹವನ್ನು ಪರೀಕ್ಷಿಸುವಲ್ಲಿ ನಮ್ಮ ಸಾಂಸ್ಕೃತಿಕ ಅಂಶಗಳು ಅಡ್ಡಿಯಾಗುತ್ತದೆ.

ಹೀಗೆ ಸಂಗ್ರಹಿಸುವ ವಿವರಗಳು ಪೋಸ್ಟ್‌ಮಾರ್ಟಂ ವರದಿಗೆ ಮೊದಲೇ ಅಗತ್ಯವಾದ ಪುರಾವೆಗಳನ್ನು ಒದಗಿಸುತ್ತವೆ. ಆದರೆ ತಹಶೀಲದಾರರು ಹುಡುಗಿಯ ತಂದೆ ತಾಯಿರನ್ನು ಕಛೇರಿಗೆ ಕರೆಸಿ ಅಥವಾ ಶವಾಗಾರದಲ್ಲಿ ಅವರ ಹೇಳಿಕೆಗಳನ್ನು ದಾಖಲಿಸುವುದು ನಮ್ಮ ಗಮನಕ್ಕೆ ಬಂದಿದೆ. ಈ ರೀತಿಯ ವಿವರಗಳಿಂದಾಗಿ, ಅಪರಾಧಿ ಶಿಕ್ಷೆಯಿಂದ ತಪ್ಪಿಸಿಕೊಂಡು ಕಾನೂನಿನ ಉದ್ದೇಶವನ್ನೇ ವಿಫಲಗೊಳಿಸುತ್ತದೆ. ತಹಶೀಲ್ದಾರರು ಕೆಲಸದ ಒತ್ತಡದಿಂದಾಗಿ ಅಪರಾಧ ನಡೆದ ಸ್ಥಳಕ್ಕೆ ಹಾಜರಾಗುವಲ್ಲಿ ವಿಳಂಬವಾಗುತ್ತದೆ. ಅವರು ಬರುವ ಅನಿರ್ದಿಷ್ಟ ಸಮಯದವರೆಗೆ ಹೆಣವನ್ನು ಮನೆಯಲ್ಲಿ ಇಡುವುದು ಪೋಲೀಸರಿಗೂ ಕಷ್ಟವಾಗುತ್ತದೆ. ಹಾಗಾಗಿ ಹೆಣವನ್ನು ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಲಾಗುತ್ತದೆ. ಪಂಚನಾಮೆ ಮುಗಿಯುವ ಮೊದಲೇ ಪೋಸ್ಟ್‌ಮಾರ್ಟಂ ಮಾಡುವ ಹಾಗಿಲ್ಲ, ಹೀಗಾಗಿ ಪೋಸ್ಟ್‌ಮಾರ್ಟಂ ಮಾಡುವಲ್ಲಿಯೂ ವಿಳಂಬವಾಗುತ್ತದೆ. ಕೆಲವೊಮ್ಮೆ ಸಾವು ಸಂಭವಿಸಿದ ನಂತರ ಪೋಸ್ಟ್ ಮಾರ್ಟಂಗಾಗಿ ೩೬ರಿಂದ ೪೮ ಗಂಟೆಯ ಕಾಲ ಕಾಯಬೇಕಾಗುತ್ತದೆ. ಹೀಗೆ ಕಾಯುವುದು ಹುಡುಗಿಯ ತಂದೆ-ತಾಯಂದಿರಿಗೆ ಎದೆಬಿರಿಯುವ ಯಮಯಾತನೆ. ಪ್ರಸ್ತುತದಲ್ಲಿರುವ ಕಾನೂನಿನ ಅವಕಾಶಗಳನ್ನು ಸೂಕ್ತವಾಗಿ, ಪರಿಣಾಮಕಾರಿಯಾಗಿ ಜಾರಿಗೆ ಬರುವಂತೆ ಒತ್ತಡವನ್ನು ಹಾಕಬೇಕಾಗಿರುವುದು ಅತ್ಯಗತ್ಯವಾಗಿದೆ.

ಸಂಬಂಧಪಟ್ಟವರ ಹೇಳಿಕೆಗಳನ್ನು ದಾಖಲಿಸುವಲ್ಲಿ ತಹಶೀಲ್ದಾರರು ತೋರುವ ಅಸಹನೆಯ ಬಗ್ಗೆ ಸಾಕಷ್ಟು ದೂರುಗಳು ಬಂದಿದೆ; ಮಗಳನ್ನು ಕಳೆದುಕೊಂಡು ದುಃಖತಪ್ತರಾದ ತಂದೆ-ತಾಯಿಯರು ಹೇಳಿಕೆ ನೀಡುವಾಗ 'ನೆನಪು' ಕೈಕೊಡಬಹುದು. ದುಃಖದಲ್ಲಿ ಮುಳುಗಿರುವ ತಂದೆ-ತಾಯಿ ಘಟನೆಗಳನ್ನು ಕ್ರಮಬದ್ಧವಾಗಿ ಹೇಳಲು ಅಶಕ್ತರಾಗಿರುತ್ತಾರೆ. ಅಂತಹ ಸಂದರ್ಭದಲ್ಲಿ ಶವಸಂಸ್ಕಾರ ಕಾರ್ಯಗಳೆಲ್ಲ ಮುಗಿದ ಮೇಲೆ ಹೇಳಿಕೆಗಳನ್ನು ವಿವರವಾಗಿ ನೀಡಲು ಅವಕಾಶ ನೀಡಬೇಕು.

ವರದಕ್ಷಿಣೆ ಹಾಗೂ ಅದರ ಬೇಡಿಕೆಗೆ ಸಂಬಂಧಪಟ್ಟ ಕೇಸುಗಳಲ್ಲಿ, ತಂದೆ-ತಾಯಿಯರಿಗೆ, ಮಗಳಿಗೆ ನೀಡುವ ಹಿಂಸೆಯ ಅರಿವಿದ್ದರೂ, ಹಿಂಸೆಯ ಸ್ವರೂಪದ ಅರಿವು ಅವರಿಗಿರುವುದಿಲ್ಲ. ಹಳ್ಳಿಗಳಿಂದ ಪಟ್ಟಣಗಳಿಗೆ ಕೊಟ್ಟಿರುವ ಕುಟುಂಬಗಳಲ್ಲಿ ಭೇಟಿಯು ಅಪರೂಪವಾಗಿರುತ್ತದೆ. ಪಂಚನಾಮೆಯಲ್ಲಿ ಆಘಾತಕ್ಕೊಳಗಾದ ತಂದೆ, ತಾಯಿ, ಸಾವು ಸಂಶಯಾಸ್ಪದವೆಂದರೂ, ವಿವರಗಳನ್ನು ನೀಡುವಲ್ಲಿ ವಿಫಲರಾಗುತ್ತಾರೆ. ಎಫ್.ಐ.ಆರ್. ವರದಿಯನ್ನು ಸಾಮಾನ್ಯವಾಗಿ ತಂದೆ ತಾಯಿಯರು ಮೊದಲು ನಂಬುತ್ತಾರೆ. ಈ ವರದಿಯು ಸಾಮಾನ್ಯವಾಗಿ ಗಂಡನ ಕಡೆಯವರು ನೀಡುವ ಹೇಳಿಕೆಗಳನ್ನು ಆಧರಿಸುತ್ತದೆ. ಸ್ಟೌವ್ ಸಿಡಿಯಿತೆಂದೋ, ತಾಳಲಾರದ ಹೊಟ್ಟೆ ನೋವು ಮುಂತಾದ ಕಾರಣಗಳನ್ನು ಅವರೂ ನಂಬುತ್ತಾರೆ. ಆದರೆ ಶವಸಂಸ್ಕಾರ ಕಾರ್ಯಗಳೆಲ್ಲಾ ಮುಗಿದ ಮೇಲೆ, ಬೇರೆಯವರ ಮಾತುಗಳಿಂದ, ನೆರೆಹೊರೆಯವರ ಹೇಳಿಕೆಗಳಿಂದ, ಸಾವು ಸಹಜವಾದುದಲ್ಲ ಎಂಬ ಸತ್ಯ ಗೋಚರವಾಗುತ್ತದೆ. ಕ್ರಮೇಣ ಸಹಜವಾದ ಸಾವೆಂದು ನಂಬಿದ್ದ ಸತ್ಯ ಸುಳ್ಳಾಗಿ ಕೌಟುಂಬಿಕ ಹಿಂಸೆಯಿಂದ ಮಗಳ ಕೊಲೆಯಾಗಿರುವುದು ಮನದಟ್ಟಾಗುತ್ತದೆ. ಆದರೆ ನಂತರದ ಹೇಳಿಕೆಗಳನ್ನು ದಾಖಲಿಸಲು ತಹಶೀಲ್ದಾರರು ನಿರಾಕರಿಸುತ್ತಾರೆ. ಇಂತಹ ಹರಿದು ಹಂಚಿಹೋದ ಸಾಕ್ಷಿಗಳಿಗೆ ಕಾನೂನಿನ ಚೌಕಟ್ಟಿನಲ್ಲಿ ಅವಕಾಶವಿದೆಯೆ?

ತಹಶೀಲ್ದಾರರು ದಾಖಲಿಸಿಕೊಂಡ ಹೇಳಿಕೆಗಳನ್ನು ಪುನಃ ಅವರಿಗೆ ಓದಿ ಹೇಳಬೇಕಾಗುತ್ತದೆ. ಆದರೆ ಸಾಮಾನ್ಯವಾಗಿ ಇದು ನಡೆಯುವುದೇ ಇಲ್ಲ. ಸಂಧ್ಯಾರಾಣಿಯ ಕೇಸ್‌ನಲ್ಲಿ (ನವೆಂಬರ್ 1996) ತಹಶೀಲ್ದಾರರ ಬದಲಾಗಿ ಪೋಲೀಸ್ ರೈಟರ್ ಹೇಳಿಕೆಗಳನ್ನು ದಾಖಲಿಸಿದ್ದ. ಹೀಗೆ ದಾಖಲಿಸುವಾಗ ಸಂಧ್ಯಾ, ಅವಳ ಗಂಡ ಸಂತೋಷದಿಂದಲೇ ಬದುಕುತ್ತಿದ್ದಾಳೆಂದು ದಾಖಲಿಸಿದ್ದ. ಮಡಿವಾಳದ ಲಕ್ಷ್ಮಿಯ ಕೇಸ್‌ನಲ್ಲಿ ಅವಳ ತಂದೆ-ತಾಯಿಯರನ್ನು ಕಛೇರಿಗೆ ಕರೆಸಿ ಹೇಳಿಕೆಗಳನ್ನು ದಾಖಲು ಮಾಡಿಕೊಳ್ಳುವುದರ ಮೂಲಕ ಪಂಚನಾಮೆಯ ಉದ್ದೇಶವನ್ನೇ ವಿಫಲಗೊಳಿಸಲಾಯಿತು.

ಇಂದು ಸರಕಾರ ಹಾಗೂ ಅದರ ಅಂಗಸಂಸ್ಥೆಗಳು ನಡೆಸುವ ತನಿಖೆಗಳ ಬಗ್ಗೆ ಸಾರ್ವಜನಿಕರು ನಂಬಿಕೆಯನ್ನೂ ಕಳೆದು ಕೊಂಡಿದ್ದಾರೆ. ಕರ್ನಾಟಕದಲ್ಲಿ ಮಹಿಳಾ ಸಂಘಟನೆಗಳ ಬೇಡಿಕೆಯ ಪರಣಾಮವಾಗಿ ರಕರ್ನಾಟಕ ರಾಜ್ಯ ವರದಕ್ಷಿಣೆಗೆ ಸಂಬಂಧಪಟ್ಟ ಕೇಸುಗಳ ವಿಚಾರಣೆಗಾಗಿ ವರದಕ್ಷಿಣೆ ವಿರೋಧಿ ಘಟಕವನ್ನು ಸ್ಥಾಪಿಸಿದೆ. ಪ್ರಾರಂಭದಲ್ಲಿ ಈ ಘಟಕ ವರದಕ್ಷಿಣೆಗೆ ಸಂಬಂಧಪಟ್ಟ ಕಿರಕುಳ ಹಾಗೂ ಸಾವುಗಳನ್ನು ತನಿಖೆ ಮಾಡುತ್ತಿದ್ದು ಕ್ರಮೇಣ ವರದಕ್ಷಿಣೆಯ ಸಾವುಗಳಿಗೆ ಮಾತ್ರ ತನಿಖೆಯನ್ನು ಸೀಮಿತಗೊಳಿಸಿದೆ.

ಈ ಘಟಕದಲ್ಲಿ ನೊಂದ ಸ್ತ್ರೀಯರಿಗೆ ನ್ಯಾಯ ಒದಗಿಸಿ ಕೊಡುವ ದೃಷ್ಟಿಯಿಂದ ಮಹಿಳಾ ಇನ್ಸ್‌ಪೆಕ್ಟರನ್ನು ನೇಮಿಸಲಾಗಿತ್ತು. ಇವರು ನಡೆಸುವ ತನಿಖೆಗಳಲ್ಲೂ ಸಾಮಾನ್ಯವಾಗಿ ಕಂಡುಬರುವ ಲೋಪದೋಷಗಳು ಕಂಡುಬಂದವು. 1997ರಂದು ಕೊಲೆಯಾದ 'ಶಾರದ' ತನಿಖೆಯಲ್ಲಿ ಇಲಾಖೆಯುವರ ನಿರ್ಲಕ್ಷ್ಯೆಯನ್ನು ಕಾಣಬಹುದು. ಅವಳನ್ನೂ ಕೊಲೆಮಾಡಿ ಅತ್ಮಹತ್ಯೆಯೆಂದು ತೋರುವಂತೆ ಸುಡಲಾಗಿತ್ತು. ಪೋಲೀಸರು ಅದನ್ನು ಆತ್ಮಹತ್ಯೆಯೆಂದೆ ಪರಿಗಣಿಸಿ ಬಿಡುತ್ತಿದ್ದರು. ಆದರೆ ರಸ್ತೆಯಲ್ಲಿ ಹೋಗುತ್ತಿದ್ದ ಇಬ್ಬರು ಶಾರದಾಳ ರೋಧನವನ್ನು ಕೇಳಿ ಮಹಡಿ ಏರಿ ಹೋದಾಗ ಅವರಿಗೂ ಚಾಕು ತೋರಿಸಲಾಯಿತು. ಅವರು ಅಸಹಾಯಕತೆಯ ಮೌನದಲ್ಲಿ ಸಾವನ್ನೂ ವೀಕ್ಷಿಸಿದರು. ತನಿಖೆ ನಡೆಸಿದ ಅಧಿಕಾರಿ ಇವರ ಹೇಳಿಕೆಗಳನ್ನು ದಾಖಲು ಮಾಡಿದ್ದರೂ, ಚಾರ್ಜ್‌ಶೀಟಿನಲ್ಲಿ ಅವರ ಹೇಳಿಕೆಗಳನ್ನು ಕೈಬಿಡಲಾಯಿತು ತನಿಖಾಧಿಕಾರಿಯ ಪ್ರಕಾರ ಅವರು 'ಗೌರವಾರ್ಹ' ಸಾಕ್ಷಿ ಗಳಾಗಿರಲಿಲ್ಲ.

ಸಬೀಹಾಳನ್ನು ಅವಳ ಗಂಡ ಹೊಡೆದು ಸಾಯಿಸಿ, ಅವಳ ದೇಹವನ್ನು ಎಳೆದು ತಂದು ಫ್ಯಾನಿಗೆ ನೇತುಹಾಕಿದ್ದನ್ನು ಎಂಟು. ವರ್ಷದ ಕೆಲಸ ಮಾಡುವ ಹುಡುಗ ನೋಡಿದ್ದ. ಅವನು ನೋಡಿದ್ದನ್ನು ಸಿ.ಓ.ಡಿ ಮುಂದೆ ಹೇಳಿಕೆಯನ್ನು ನೀಡಿದ್ದ. ಆದರೆ ಆ ಹುಡುಗ ಅಪ್ರಾಪ್ತ ವಯಸ್ಸಿನ ಬಾಲಕ ಎಂದು ಅವನ ಸಾಕ್ಷ್ಯಯನ್ನು ಕೈ ಬಿಡಲಾಯಿತು. ಗಾಯತ್ರಿಯ ನೇಣು ಹಾಕಿಕೊಡು (1997ಮೇ) ಘಟನೆಯಲ್ಲಿ ಹೆಚ್ಚು ಸಾಕ್ಷಿಗಳಿವೆಯೆಂಬ ನೆಪದಲ್ಲಿವ ಪ್ರಮುಖವಾದ ಸಾಕ್ಷಿಯನ್ನೂ ಕೈ ಬಿಡಲಾಗಿತ್ತು.

ನಾವು ಭೇಟಿ ಮಾಡಿದ ತನಿಖಾಧಿಕಾರಿಗಳು ಗಂಡನ ಪರವಾಗಿರುತ್ತಾರೆ. ಸಾವಿಗೊಳಗಾದ ಹುಡಿಗಿಯ ಮನೆಗೆ ಭೇಟಿ ನೀಡಿದ ಅಧಿಕಾರಿಗಳು "ನೀವು ಅವನನ್ನು ಕೆಟ್ಟವನು ಎಂದು ಹೇಳುತ್ತೀರಿ? ಆದರೆ ನೆರೆಹೊರೆಯವರು ಒಳ್ಳೆಯವನೆಂದು ಹೇಳುತ್ತಾರೆ'' ಎಂಬುದು ಸಾಮಾನ್ಯವಾದ ಹೇಳಿಕೆ ತನಿಖೆಯನ್ನು ನಡೆಸುವ ಪ್ರಕ್ರಿಯೆಯಲ್ಲಿ ವಿವಿಧ ಘಟಕಗಳ ಪಾತ್ರ, ಜವಾಬ್ದಾರಿ, ಹಾಗೂ ನಿರ್ವಹಿಸಬೇಕಾದ ಕೆಲಸ ಮುಂತಾದವುಗಳನ್ನು ನಿರ್ಧಿಷ್ಟವಾಗಿ ಗುರುತಿಸಬೇಕಾಗಿದೆ. ತನಿಖೆಯ ಹಂತದಲ್ಲಿ ವಿವಿದ ಘಟಕಗಳು ತೊಡಗಿರುವುದರಿಂದ ಒಂದು ಘಟಕವನ್ನ ಜವಾಬ್ದಾರಿ ಯನ್ನಾಗಿಸುವುದು ಕಷ್ಟ. ಸ್ಥಳೀಯ ಪೋಲೀಸರು ವರದಕ್ಷಿಣೆ ವಿರೋಧಿ ತನಿಕಾಧಿಕಾರಿಗಳನ್ನು ದೂರುವುದು, ಕೇಸ್‌ಗಳು ಸ್ಥಳೀಯ ಪೋಲಿಸರಿಂದ ಹಾಳಾಯಿತೆಂದು ಇವರು ದೂರುವುದು ಸರ್ವೇ ಸಾಮಾನ್ಯವಾಗಿದೆ.

ಈ ವಿವಿಧ ಘಟಕಗಳು ಒಟ್ಟಾಗಿ ತನಿಖೆ ನಡೆಸುವ, ಬದಲಾಗಿ ಅವರ ಕೇಸಿನ ಬಗ್ಗೆ ಇರುವ ಗೊಂದಲದಿಂದಾಗಿ ಅವರ ನಡುವೆ ಘರ್ಷಣೆಗೆ ಎಡೆಮಾಡಿಕೊಡುತ್ತಿದೆ. ಇದು ಆರೋಪಿಯು ಸಾಕ್ಷಿಗಳನ್ನು ನಾಶಪಡಿಸಲು, ನ್ಯಾಯ ದೊರೆಯದಂತೆ ಮಾಡಲು ಹೆಚ್ಚು ಅವಕಾಶ ಹಾಗೂ ಸಮಯವನ್ನು ಕಲ್ಪಿಸಿಕೊಡುತ್ತದೆ.

ಅಸಹಜ ಸಾವಿನ ಪ್ರಕರಣದಲ್ಲಿ ಮಹಿಳೆಯರು ಹಲವಾರು ಗಂಟೆಗಳ ಕಾಲ ಬದುಕು - ಸಾವಿನ ನಡುವೆ ಹೋರಾಟ ನಡೆಸುತ್ತಾರೆ. ಸಾಯುವ ಮೊದಲು ತಮ್ಮ ಅಳಲನ್ನು ತೋಡಿಕೊಳ್ಳಲು ಶಕ್ತರಾಗಿರುತ್ತಾರೆ. ಆದರೆ ಅವರ ಹೇಳಿಕೆಗಳನ್ನು ದಾಖಲಿಸುವಲ್ಲಿ ನಡೆಯುವ ಅನ್ಯಾಯ ಅಕ್ರಮಗಳು ಅವರಿಗೆ ನ್ಯಾಯ ದೊರೆಯದಂತೆ ಮಾಡುತ್ತದೆ. ಆತ್ಮಹತ್ಯೆ ಅಥವಾ ಕೊಲೆಗಳು ಸಾಮಾನ್ಯವಾಗಿ ಗಂಡನ ಮನೆಯಲ್ಲಿ ನಡೆಯುವುದರಿಂದ ಸಾಮಾನ್ಯವಾಗಿ ಅವನ ಮನೆಯವರೇ ಅವಳನ್ನು ಆಸ್ಪತ್ರೆಗೆ ಸೇರಿಸುತ್ತಾರೆ. ಆಸ್ಪತ್ರೆಗೆ ಕರೆದುಕೊಂಡು ಹೋಗುವ ದಾರಿಯಲ್ಲಿಯೆ "ಸ್ಟೌವ್ ಸಿಡಿದೋ, ಅಥವಾ ಹೊಟ್ಟೆ ನೋವಿನಿಂದ'' ಎಂದು ಸುಳ್ಳು ಹೇಳಿಕೆಗಳನ್ನು ನೀಡುವಂತೆ ಒತ್ತಾಯಿಸುತ್ತಾರೆ. ಹುಡಿಗಿಯ ಹೇಳಿಕೆಗಳನ್ನು ಸಾಮಾನ್ಯವಾಗಿ, ಗಂಡನ, ಅತ್ತೆ-ಮಾವನ ಎದುರಿಗೇ ದಾಖಲಿಸಲಾಗುತ್ತದೆ. ಆದುದರಿಂದ ವಾಸ್ತವವಾಗಿ ನಡೆದ ಸತ್ಯವನ್ನು ಹೇಳಲಾಗದೆ ಮರೆಮಾಚಲಾಗುತ್ತದೆ. ಪೋಲೀಸರು ಯಾರ ಪರವಾಗಿದ್ದಾರೆ ಎನ್ನುವುದರ ಆಧಾರದ ಮೇಲೆ ಹೇಳಿಕೆಗಳನ್ನು ಅವರ ಪರವಾಗಿ ದಾಖಲು ಮಾಡಲಾಗುತ್ತದೆ. ಬೈಯಪ್ಪನ ಹಳ್ಳಿಯ ಶೋಭಾ (1997 ಮಾರ್ಚ್)ಳ ಸಾವಿನ ಹೇಳಿಕೆಯಲ್ಲಿ ಅವಳು ಸಹಿ ಮಾಡಲು ಬರುತ್ತಿದ್ದರೂ, ಅವಳ ಕೈಗಳು ಸುಟ್ಟಿರದಿದ್ದರೂ ಸಹಿ ಮಾಡಿದ್ದು ಅವಳ ಗಂಡ. ಅವಳ ಹೆಬ್ಬೆಟ್ಟಿನ ಗುರುತನ್ನೂ ಹಾಕಿಸಲಾಗಿತ್ತು. ಅವಳು ಸತ್ತು ಮೂರು ದಿನದ ನಂತರ ಅವಳ ತಂದೆ ತಾಯಿಗೆ ವಿಷಯ ತಿಳಿಸಲಾಯಿತು.

ಸುಮಾರು 40 ಸುಟ್ಟ ಘಟನೆಗಳಲ್ಲಿ ಅಡಿಗೆ ಮಾಡುವಾಗ ಸ್ಟೌವ್ ಸಿಡಿದು ಉಂಟಾದ ಸಾವು ಎಂದು ಹೆದರಿಸಿ ಒತ್ತಾಯದಿಂದ ಹೇಳಿಕೆ ದಾಖಲಿಸಲಾಗಿದೆ. ಮಕ್ಕಳ ಭವಿಷ್ಯ, ವಯಸ್ಸಾದ ತಂದೆ-ತಾಯಿಯರ ರಕ್ಷಣೆಯ ಕಾರಣಗಳಿಂದಾಗಿ ಸ್ತ್ರೀಯರು ಸತ್ಯವನ್ನೂ ಮರೆ ಮಾಚುತ್ತಾರೆ.

ಕೆಂಗೇರಿಯ ಭಾಗ್ಯಲಕ್ಷ್ಮಿ (1997 ಜೂನ್)ಯ ಕೇಸ್‌ನಲ್ಲಿ, ಆಕೆ ಮೊದಲು ಸೀರೆಗೆ ಬೆಂಕಿ ತಗುಲಿತೆಂದು ನಂತರ ತನ್ನ ಅಣ್ಣನ ಬಳಿ ಮನೆಯಲ್ಲಿ ಕೊಡುವ ಹಿಂಸೆಯನ್ನು ತಡೆಯಲಾರದೇ, ತಾನೇ ಸುಟ್ಟುಕೊಂಡಳೆಂದು ಹೇಳಿದ್ದಳು. ಬ್ಯಾಟರಾಯನ ಪುರದ ಭಾನುಮತಿ(1997 ಎಪ್ರಿಲ್)ಯ ಗಂಡ ಅವಳನ್ನು ಸೀಮೆ ಎಣ್ಣೆ ಹಾಕಿ ಸುಟ್ಟು ಸಾಯಿಸಿ ಸೀರೆಗೆ ಬೆಂಕಿ ಹತ್ತಿತೆಂದು ಹೇಳಿಕೆ ನೀಡುವಂತೆ ಒತ್ತಾಯಿಸಿದ್ದ. ಎರಡು ದಿನ ಬದುಕುಳಿದಿದ್ದ ಭಾನುಮತಿ ತನ್ನ ತಂದೆ ತಾಯಿಯರಲ್ಲಿ ಸತ್ಯವನ್ನು ಹೇಳಿದ್ದ ಸಂಗತಿ ಗಂಡನಿಗೆ ತಿಳಿದು ವಯಸ್ಸಾದ ಅವಳ ತಂದೆ-ತಾಯಿಯರನ್ನು ಕೊಲೆಮಾಡುವುದಾಗಿ ಬೆದರಿಸಿದ. ತಮ್ಮ ಸಾವಿನ ಅಂಚಿನಲ್ಲೂ ಒತ್ತಡಕ್ಕೆ ಸಿಲುಕಿ ಗಂಡನಿಗೆ ವಿಧೇಯವಾಗಿರುವುದೇ, ಅವಳಿಗೆ ನ್ಯಾಯ ದೊರೆಯದಂತೆ ವಂಚಿಸುತ್ತದೆ.

**ಮರಣೋತ್ತರ ಪರೀಕ್ಷೆ :**

ಶಿಕ್ಷೆ ನೀಡುವ ಪ್ರಕ್ರಿಯೆಯಲ್ಲಿ ಮರಣೋತ್ತರ ವರದಿಯು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಮದುವೆಯಾಗಿ ಏಳುವರ್ಷದ ಒಳಗೆ ಸ್ತ್ರೀಯೊಬ್ಬಳು ಅಸಹಜ ಸಾವಿಗೆ ಒಳಗಾದರೆ ಕಾನೂನಿನ ಪ್ರಕಾರ ಮರಣೋತ್ತರ ಪರೀಕ್ಷೆಯನ್ನು ಕಡ್ಡಾಯವಾಗಿ ಮಾಡಬೇಕು. ಮರಣೋತ್ತರ ವರದಿಯು, ಅವರ ಅಸಹಜ ಸಾವಿನ ಸುಳಿವನ್ನು ನೀಡುತ್ತದೆ.

ಆದರೆ ವಾಸ್ತವವಾಗಿ ಮರಣೋತ್ತರ ವರದಿಗಳು, ನಾವು ನಿರೀಕ್ಷೆಮಾಡುವ, ಅಗತ್ಯವಾದ ಅಂಶಗಳನ್ನು ಒಳಗೊಂಡಿರುವುದಿಲ್ಲ. ಬಹಳಷ್ಟು ವರದಿಗಳು ಯಾವುದೇ ನಿರ್ಧಿಷ್ಟ ವಿವರಗಳನ್ನು ಒಳಗೊಂಡಿರದೇ ಬೇಜವಾಬ್ದಾರಿಯಿಂದ ಬರೆಯಲಾಗುತ್ತದೆ. ಪೋಲೀಸ್ ವರದಿ ಬಂದ ತಕ್ಷಣ, ವೈದ್ಯಕೀಯ ಮನಸ್ಸು ಅದನ್ನು ಆತ್ಮಹತ್ಯೆಯೆಂದು ನಿರ್ಧರಿಸಿಬಿಟ್ಟಿರುತ್ತದೆ. ಅವಳೇ ಸುಟ್ಟುಕೊಂಡಿದ್ದಾಳೆಯೆ? ಅಥವಾ ಬೇರೆಯವರು ಮಾಡಿರಬಹುದೆ? ಆತ್ಮ ಹತ್ಯೆಯನ್ನು ಅವಳೇ ಮಾಡಿಕೊಂಡಿದ್ದರೆ, ಅದರ ಸೂಚನೆಗಳು ಏನು? ಬೇರೆಯವರು ಮಾಡಿದ್ದರೆ, ಅದರ ಸೂಚನೆಗಳು ಏನು ಎಂಬ ವಿವರಗಳನ್ನು ಆಳವಾಗಿ ಪರಿಶೀಲಿಸುವುದೇ ಅಲ್ಲ. ಸಾಮಾನಯವಾಗಿ "ಸ್ಟಾವ್‌ನಿಂದ' ಉಸಿರುಕಟ್ಟಿ''ಯೆಂದು ಯಾಂತ್ರಿಕವಾದ ನಿರ್ಧಾರಕ್ಕೆ ಬರಲಾಗುತ್ತದೆ. ಸತ್ತ ವ್ಯಕ್ತಿಯ ದೇಹದ ಮೇಲೆ ಕಂಡು ಬಂದ, ಗಾಯದ ಸ್ವರೂಪಗಳನ್ನು ಕುರಿತು ವಿವರಗಳನ್ನೂ ನೀಡುವಲ್ಲಿ ಈ ವರದಿಗಳು ವಿಫಲವಾಗಿವೆ. ಉದಾಹರಣೆಗೆ ಕುತ್ತಿಗೆ ಹಿಚುಕಿ ಸಾಯಿಸಿ ನಂತರ ಸುಟ್ಟು ಬಿಡುವ ಪ್ರಕರಣಗಳಲ್ಲಿ ಶ್ವಾಸಕೋಶ ಬಾಗದಲ್ಲಿ ಕಪ್ಪು ಅಂಶ ಇದೆ ಅಥವಾ ಇಲ್ಲವೆಂಬುದನ್ನು ವರದಿ ವಿವರಿಸಬೇಕು. ಇದು ಇದ್ದರೆ ಸುಡುವ ಸಮಯದಲ್ಲಿ ಆಕೆ ಜೀವಂತವಾಗಿದ್ದಳೆಂಬುದನ್ನು ಸಾಬೀತು ಪಡಿಸುತ್ತದೆ.

ಆ ಅಂಶ ಕಂಡು ಬರದಿದ್ದರೆ ಸುಡುವ ಸಮಯದಲ್ಲಿ ಜೀವಂತವಾಗಿಲ್ಲವೆಂಬುದನ್ನು ಹೇಳುತ್ತದೆ. ಇತರ ಸಾಂದರ್ಭಿಕ ಸಾಕ್ಷಿಗಳೊಂದಿಗೆ, ಮರಣೋತ್ತರ ವರದಿ, ಈ ಅಂಶವನ್ನು ಸ್ಪಷ್ಟವಾಗಿ ಹೇಳಿದ್ದರೆ ಅಪರಾಧಿಗಳಿಗೆ ಶಿಕ್ಷೆ ನೀಡುವಲ್ಲಿ ಖಂಡಿತ ನೆರವಾಗುತ್ತದೆ. ಈಗಾಗಲೇ ಉದಾಹರಿಸಿದ ಶಾರದಳ ಪ್ರಕರಣದಲ್ಲಿ ಈ ಅಂಶವನ್ನು ವಿವರವಾಗಿ ಗಮನಿಸಬಹುದು. ಶಾರದಳನ್ನು ಅವಳ ಗಂಡ ಕತ್ತು ಹಿಸುಕಿ, ಕೊಲೆ ಮಾಡಿ ನಂತರ ಬೆಂಕಿ ಹಚ್ಚಿದ್ದ. ಪೀಣ್ಯ ದಾಸರಹಳ್ಳಿಯ ಮುಖ್ಯ ರಸ್ತೆಯಲ್ಲಿ ಮನೆಯ ಮೊದಲ ಮಹಡಿಯಿಂದ ಆಕ್ರಂದನದ ಕೂಗನ್ನು ಕೇಳಿದ ದಾರಿಯಲ್ಲಿ ಹೋಗುವ ಇಬ್ಬರು, ಕಳ್ಳರಿರಬಹುದೆಂದು ಓಡಿ ಹೋಗಿ ನೋಡಿದಾಗ, ತಲೆಯನ್ನು ಒಂದು ಬೆಡ್‌ಶೀಟಿನಿಂದ ಮುಚ್ಚಿಕೊಂಡಿದ್ದವನೊಬ್ಬ ಶಾರದಳ ಕತ್ತನ್ನೂ ಹಿಚುಕುತ್ತಿದ್ದ, ಅವನ ಜೊತೆಗಿದ್ದ ಇನ್ನೊಬ್ಬ ಅವಳು ಕೆಳಗೆ ಬಿದ್ದ ತಕ್ಷಣ ಅವಳನ್ನು ಸುಡುವಂತೆ ಒತ್ತಾಯಿಸುತ್ತಿದ್ದ. ಇದು ಸ್ಪಷ್ಟವಾಗಿ ಕೊಲೆಯಾಗಿದ್ದಾದರೂ ಆತ್ಮಹತ್ಯೆಯೆಂದು ತೋರುವಂತೆ ಮಾಡಲಾಗಿತ್ತು. ಮರಣೋತ್ತರ ವರದಿ "ಶಾಕ್‌ನಿಂದ ಉಂಟಾದ ಸಾವು''ಎಂದು ಹೇಳಿಕೆ ನೀಡಿತು. ಆದರೆ, ಮರಣೋತ್ತರ ವರದಿಯು, ಬೆಂಕಿ ಇಡುವಾಗ ಅವಳು ಜೀವಂತವಾಗಿದ್ದಳೆ ಅಥವಾ ಇಲ್ಲವೆ ಎಂಬ ಅಂಶವನ್ನು ವಿವರವಾಗಿ ಪರಿಶೀಲಿಸಿ ವರದಿ ನೀಡಬೇಕಾಗಿತ್ತು.

ಮಹಿಳೆಯರ ಮೇಲೆ ಹಿಂಸೆ ನಡೆಯುವ ಬಹಳಷ್ಟು ಪ್ರಕರಣಗಳಲ್ಲಿ ಅವರು ಅರೆ ಪ್ರಜ್ಞಾವಸ್ಥೆಯಲ್ಲಿರುವಾಗಲೇ, ಸತ್ತಿದ್ದಾರೆಂದು ಪರಿಗಣಿಸಿ, 'ಆತ್ಮಹತ್ಯೆ'ಯೆಂದು ತೋರಿಸಲು ಅವರನ್ನು ಸುಟ್ಟು ಬಿಡಲಾಗುತ್ತದೆ ಅಥವಾ ನೇತುಹಾಕಿಕೊಂಡಂತೆ ಮಾಡಲಾಗುತ್ತದೆ. ನೇತುಹಾಕಿದ ಪ್ರಕರಣಗಳಲ್ಲಿ ಪೋಲೀಸರು ಬರುವ ಮೊದಲೇ ಆಸ್ಪತ್ರೆಗೆ ಕರೆದುಕೊಂಡು ಹೋಗುವ ನೆಪದಲ್ಲಿ ದೇಹವನ್ನು ಕೆಳಗಿಳಿಸಲಾಗುತ್ತದೆ. ಅಥವಾ ದೇಹದ ಕಾಲುಗಳು ನೆಲವನ್ನು ಮುಟ್ಟುವಂತೆ ಮಾಡಲಾಗುತ್ತದೆ. ಇಂತಹ

ಕ್ಲಿಷ್ಟಕರ ಸಂದರ್ಭದಲ್ಲಿ, ಅವಳೇ ಸುಟ್ಟುಕೊಂಡಳೆ, ಅಥವಾ ಬೇರೆಯವರು ಸುಟ್ಟರೆ ಇದು ಕೊಲೆಯೆ? ಕೊಲೆಯನ್ನು ಆತ್ಮಹತ್ಯೆಯೆಂದು ತೋರಲಾಗಿದೆಯೆ? ಈ ಪ್ರಶ್ನೆಗಳಿಗೆ ಮರಣೋತ್ತರ ವರದಿ ತೃಪ್ತಿಕರ ಉತ್ತರವನ್ನು ನೀಡುವವಲ್ಲಿ ಸೋಲುತ್ತದೆ.

ನ್ಯಾಯಾಲಯದ ತನಿಖೆಗಳಲ್ಲಿ ಮರಣೋತ್ತರ ವರದಿಗೆ ಬಹುಮುಖ್ಯ ಪ್ರಾಮುಖ್ಯತೆಯನ್ನು ನೀಡಲಾಗುತ್ತಿದೆ. ಆದರೆ, ಹಣ ಚೆಲ್ಲಿ ಮರಣೋತ್ತರ ವರದಿಯನ್ನು ಪಡೆಯಬಹುದೆಂಬ ಅಂಶವೂ ಸಹ ಸಾಮಾನ್ಯವಾಗಿ ಪ್ರಚಲಿತವಾಗಿದೆ. ಆರೋಪಿಗಳಿಗೆ ಬೇಕಾದ ಸ್ವರೂಪದಲ್ಲಿ ಮರಣೋತ್ತರ ವರದಿಯನ್ನು ನೀಡುವುದು ಜನಸಾಮಾನ್ಯರಿಗೆ ಪರಿಚಿತ ಸಂಗತಿ. ಹೀಗಿದ್ದ ಸಂದರ್ಭದಲ್ಲಿ ಮರಣೋತ್ತರ ವರದಿಯು ಸಂಪೂರ್ಣ ಸತ್ಯವನ್ನು ಒಳಗೊಂಡಿರುತ್ತದೆಯೆಂದು ನಂಬುವುದು ಹೇಗೆ? ಈ ಅನ್ಯಾಯವನ್ನು ತಪ್ಪಿಸಬೇಕಾಗಿದೆ. ಮರಣೋತ್ತರ ಪರೀಕ್ಷೆ ನಡೆಸುವ ಸಂದರ್ಭದಲ್ಲಿ ನೊಂದ ತಂದೆ-ತಾಯಿಗಳು ಸೂಚಿಸುವ ಅವರ ವೈದ್ಯರೊಬ್ಬರು ಹಾಜರಿಯ ಮೇಲೆ ಮಾಡುವುದರಿಂದ, ಸಾರ್ವಜನಿಕರಿಗೆ ಸ್ವಲ್ಪ ಮಟ್ಟಿಗಾದರೂ ವಿಶ್ವಾಸವನ್ನು ಮೂಡಿಸಲು ಸಾಧ್ಯ. ಈ ಹಂತದಲ್ಲಿ ಬೆರಳುತಜ್ಞರ ನೆರವನ್ನು ಪಡೆಯುವುದರಿಂದ, ಸಾಕ್ಷಿ ನಾಶಪಡಿಸುವ ಅವಕಾಶವನ್ನು ತಪ್ಪಿಸಬಹುದು.

**ಸುಟ್ಟ ಗಾಯಗಳ ಚಿಕಿತ್ಸೆ :**

ಪಟ್ಟಣಗಳಲ್ಲಿ ಹೆಚ್ಚು ಮಹಿಳೆಯರು ಸುಟ್ಟ ಗಾಯಗಳಿಂದ ಸಾವನಪ್ಪುತ್ತಿರುವುದು ನಿರ್ವಿವಾದ ಅಂಶ. ಇದು ಬಹಳ ಸುಲಭವಾದ ವಿಧಾನವಾಗಿದೆ. ಏಕೆಂದರೆ ಸುಡುವುದರ ಮೂಲಕ ಸಾಕ್ಷಿಯ ಎಲ್ಲ ಪುರಾವೆಗಳನ್ನು, ಹಿಂಸೆಯ ಎಲ್ಲ ಗುರುತುಗಳನ್ನು ನಾಶಪಡಿಸ ಬಹುದಾಗಿದೆ. ಆರೋಪಿಯ ಬಿಡುಗಡೆಗೂ ಇದು ಹೆಚ್ಚು ಅವಕಾಶವನ್ನು ನೀಡುತ್ತದೆ. ಏಕೆಂದರೆ, ಸ್ವತಃ ಸುಟ್ಟುಕೊಂಡಿರುವುದೇ ಅಥವಾ ಬೇರೆಯವರು ಸುಟ್ಟಿರುವುದೇ ಎಂಬ ಸತ್ಯ ನಿಗೂಢವಾಗಿಯೇ ಉಳಿಯುತ್ತದೆ. ಇದು ಕೇವಲ ಕಾನೂನಿನ ಒಂದು ಚೌಕಟ್ಟಿನ ಒಳಗೆ ಉಳಿಯುವ ಕಾಳಜಿಯಲ್ಲ. ಮೂಲಭೂತವಾಗಿ ಇದು ಮಾನವೀಯ ಕಾಳಜಿ. ಹೀಗೆ ಸುಟ್ಟ ಗಾಯಗಳಿಂದ ಆಸ್ಪತ್ರೆಗೆ ಬರುವ ಬಹಳಷ್ಟು ಮಹಿಳೆಯರು ಬಡ ಮಧ್ಯಮ ವರ್ಗದ ಮಹಿಳೆಯರು. ಖಾಸಗೀ ಆಸ್ಪತ್ರೆಗೆ ಹೋಗಲು ಶಕ್ತರಾಗದ ಪ್ರಯುಕ್ತ ವಿಕ್ಟೋರಿಯಾ ಆಸ್ಪತ್ರೆಗೆ ಸೇರಿಸುತ್ತಾರೆ.

ಗಾಳಿ, ಬೆಳಕಿಲ್ಲದ, ವಾಸನೆಯಿಂದ ಕೂಡಿದ ವಾರ್ಡಿನಲ್ಲಿ ಸಾಲಾಗಿ ಸುಟ್ಟವರನ್ನು ಮಲಗಿಸಲಾಗಿರುತ್ತದೆ. ಮಾನವೀಯ ಕಾಳಜಿಯಿಲ್ಲದ ಯಾಂತ್ರಿಕ ನೋಟ ಕಂಡುಬರುತ್ತದೆ. ಗುರುತಿಸಲು ಸಾಧ್ಯವಾಗದಷ್ಟು ಸುಟ್ಟಿರುವ, ನೋವು, ಆಕ್ರಂದನಗಳಿಂದ ಸ್ತ್ರೀಯರು ನರಳುತ್ತಿದ್ದರೆ, ಆಸ್ಪತ್ರೆಯ ವಾತಾವರಣ, ನಿರ್ಲಕ್ಷ್ಯ, ಉದಾಸೀನತೆ ತಟಸ್ಥ ಮನೋಭಾವನೆಯಿಂದ ಕೂಡಿರುತ್ತದೆ. ವೈದ್ಯಕೀಯ ಸಿಬ್ಬಂದಿ ವರ್ಗ ತೋರುವ ನಿರ್ಲಕ್ಷ್ಯ, ಬೇಜವಾಬ್ದಾರಿ ಅಮಾನವೀಯತೆಯನ್ನು ಪ್ರತಿಬಿಂಬಿಸುತ್ತದೆ. ಸುಟ್ಟುಕೊಂಡವರ ನೋವು, ನರಳಾಟ, ಮಗಳನ್ನು ಬದುಕಿಸಿಕೊಳ್ಳಬೇಕೆಂಬ ತಂದೆ-ತಾಯಿಯರ ರೋಧನಕ್ಕೆ ಸೂಕ್ಷ್ಮವಾಗಿ ಸಂವೇದಿಸದೇ ಜಡ್ಡುಗಟ್ಟಿ ಹೋಗಿದೆ. ಹೀನಾಯವಾಗಿ ನಡೆಸಿಕೊಳ್ಳುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಈ ವಾರ್ಡನ್ನು 'Intensive Centre Unit' ಎಂದು ಪರಿಗಣಿಸಿ, ಹಗಲು ರಾತ್ರಿಯಲ್ಲ ಎಚ್ಚರಿಕೆಯಿಂದ ಚಿಕಿತ್ಸೆ ಮಾಡಿದರೆ, ಎಷ್ಟೋ ಅಮೂಲ್ಯವಾದ ಪ್ರಾಣಗಳನ್ನು ಉಳಿಸಬಹುದು. ಒಂದು ದಿನಕ್ಕೆ 5 ಸುಟ್ಟ ಗಾಯಗಳ ಕೇಸುಗಳು ಆಸ್ಪತ್ರೆಗೆ ದಾಖಲಾದರೆ, ಅದರಲ್ಲಿ ಒಂದೂ ಬದುಕುಳಿಯುವುದಿಲ್ಲ ಎಂಬುದನ್ನು ಆಸ್ಪತ್ರೆಯ ದಾಖಲೆಗಳು ಹೇಳುತ್ತವೆ. ಹೀಗೆ ಉಂಟಾಗುವ ಸಾವಿಗೆ, ಸುಟ್ಟ ಪ್ರಮಾಣಕ್ಕಿಂತ, ನಿರ್ಲಕ್ಷ್ಯ ಹಾಗೂ ಬೇಜವಾಬ್ದಾರಿ ಕಾರಣವಾಗಿರುತ್ತದೆ.

ವಿಕ್ಟೋರಿಯಾ ಆಸ್ಪತ್ರೆಗೆ ದಾಖಲಾದ ಸುಟ್ಟ ಗಾಯಗಳಿಂದ ನೊಂದ ಮಗಳ ತಂದೆ-ತಾಯಂದಿರು ಅಲ್ಲಿಯ ಸಿಬ್ಬಂದಿ ವರ್ಗ, ವೈದ್ಯರ ಬಗ್ಗೆ ನಮಗೆ ದೂರುಗಳನ್ನು ಹೇಳಿದ್ದಾರೆ. ಗಂಭೀರವಾಗಿ ಸುಟ್ಟವರು ಮರಣವನ್ನಪ್ಪುತ್ತಾರೆ. ಸ್ವಲ್ಪ ಕಡಿಮೆ ಸುಟ್ಟ ಗಾಯಗಳಾದವರನ್ನು 4ರಿಂದ 5 ಗಂಟೆಯವರೆಗೆ ವೈದ್ಯರು ಚಿಕಿತ್ಸೆಯನ್ನೇ ಮಾಡುವುದಿಲ್ಲ. ನಗಿಮುನ್ನಿಸಾ (ಮಾರ್ಚ್ 97), ಶಹತಾಜ್ ಮತ್ತು ಮೇರಿ (ಏಪ್ರಿಲ್ 1997), ಸುಧಾ ರವಿ (ಮೇ 97), ಸುಮತಿ, ರಮಾ (ಮೇ 97) ಇವರ ತಂದೆ ತಾಯಿಯರೆಲ್ಲರೂ ತಮ್ಮ ಹೆಣ್ಣು ಮಕ್ಕಳು ಚುಚ್ಚುಮದ್ದು ನೀಡಿದ ತಕ್ಷಣ ಕೊನೆಯುಸಿರೆಳೆದ ಬಗ್ಗೆ ದೂರು ನೀಡಿದ್ದಾರೆ. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ನಡೆಯುವ ಭ್ರಷ್ಟಾಚಾರ ಸಾಂಸ್ಥಿಕ ಸ್ವರೂಪವನ್ನೇ ಪಡೆದಿದೆ. ಸಂಬಳವನ್ನು ಪಡೆಯುತ್ತಿದ್ದರೂ, ಜವಾನನಿಂದ ಹಿಡಿದು ಹಿರಿಯ ಅಧಿಕಾರಿಗಳವರೆಗೆ ಲಂಚವನ್ನು ಕೇಳಿ ಪಡೆಯಲಾಗುತ್ತದೆ.

'ಬದುಕುವ ಹಕ್ಕು' ಒಂದು ಮೂಲಭೂತ ಹಕ್ಕು. ವಿವಾಹವೆಂದರೆ ಗಂಡಿನ ಬೇಡಿಕೆಗಳನ್ನು ಪೂರೈಸಬೇಕಾದ ಈ ಯುವತಿಯರಿಗೆ ಈ ಮೂಲಭೂತ ಹಕ್ಕಿನ ಅರ್ಥವೇನು? ಗಂಡಿನ ಬೇಡಿಕೆಗಳನ್ನು ಪೂರೈಸಲೊಪ್ಪದಿದ್ದಾಗ, ವಿವಾಹವೇ ಉರುಳಾಗುತ್ತಿದೆ.

ಸ್ತ್ರೀಯರ ಮೇಲೆ, ಮನೆಯಲ್ಲಿ, ಖಾಸಗಿಯಾಗಿ ನಡೆಯುವ ಹಿಂಸೆ, ಸಾರ್ವಜನಿಕವಾಗಿ ನಡೆಯುವ ಹಿಂಸೆಯಷ್ಟೇ ಗಂಭೀರವಾದುದು. ಆದರೆ, ಪೋಲೀಸರ ದಾಖಲೆಗೆ ಇದು ಒಂದು ಹೆಚ್ಚುವರಿ ಅಂಕಿ ಅಂಶ. ವೈದ್ಯಾಧಿಕಾರಿಗಳಿಗೆ ಇದು ಇನ್ನೊಂದು ಮರಣೋತ್ತರ ಪರೀಕ್ಷೆ. ಪತ್ರಿಕಾ ಮಾಧ್ಯಮಗಳಿಗೆ ಪ್ರಕಟಲರ್ಹವಾದ ಇನ್ನೊಂದು ಸುದ್ದಿ. ಅಮಾಯಕ ಮುಗ್ಧ ಯುವತಿಯರ ಸಾವು ಯಾರನ್ನು ಕಾಡುತ್ತದೆಯೆಂಬುದು ಒಂದು ದೊಡ್ಡ ಪ್ರಶ್ನೆಯಾಗಿಯೇ ಉಳಿಯುತ್ತದೆ. ಇದು ಕೇವಲ ತಂದೆ-ತಾಯಿಯರ ಆಪ್ತರ ಮೌನರೋಧನವಾಗಿದೆ. ಸಮಾಜ ಮಹಿಳೆಯರ ಮೇಲೆ ನಡೆಸುತ್ತಿರುವ ಅಮಾನುಷವಾದ ಹಿಂಸೆಯ ಸ್ವರೂಪಕ್ಕೆ ಕುರುಡಾದರೆ, ಸುಟ್ಟ ಸಾವುಗಳ ಅಂಕಿ ಅಂಶಗಳು ದ್ವಿಗುಣಗೊಳ್ಳುತ್ತದೆ. ಸಾರ್ವಜನಿಕರು, ಮಾನವೀಯ ಕಾಳಜಿಯಿಂದ ಬದಲಾಗುತ್ತಿರುವ ಹಿಂಸೆಯ ಸ್ವರೂಪಗಳನ್ನು ಪ್ರತಿಭಟಿಸುವುದರ ಮೂಲಕ ಮಾನವೀಯ ಕಾಳಜಿಯನ್ನು ತೋರಬೇಕಾಗಿದೆ.

1. ಸಹಜ ಸಾವು ಹಾಗೂ ಮದುವೆಯಾದ 5ರಿಂದ 7ವರ್ಷದೊಳಗಿನ ಒಳಗಿನ ಸಾವುಗಳನ್ನು ಹೊರತಾಗಿ ಪ್ರತಿಸಾರಿ ಎಫ್.ಐ.ಆರ್., ಸಿ.ಓ.ಡಿ. ಮತ್ತು ವರದಕ್ಷಿಣೆ ವಿರೋಧಿ ಘಟಕವನ್ನು ತಲುಪಬೇಕು.

2. ಮರಣ ಹೊಂದಿದ ವ್ಯಕ್ತಿಯ ಶವಪರೀಕ್ಷೆಯನ್ನು ಸಮಾಜ ಕಾರ್ಯಕರ್ತರು, ನೆರೆಹೊರೆಯವರು ಸಂಬಂಧಿಕರ, ಅವರು ಸೂಚಿಸಿದ ವೈದ್ಯರ (ಸಾಧ್ಯವಿದ್ದಲ್ಲಿ ಸ್ತ್ರೀ ವೈದ್ಯರ) ಸಮ್ಮುಖದಲ್ಲಿ ನಡೆಯಬೇಕು. ದೇಹದ ಪರೀಕ್ಷೆ ನಡೆಸಿ, ಗಾಯದ, ರಕ್ತ ಹೆಪ್ಪುಗಟ್ಟಿದ, ಮೂಗು ಸಂಕುಚಿತಗೊಂಡ ಬಗ್ಗೆ ವಿವರವಾದ ವರದಿಯನ್ನು ನೀಡಬೇಕು.

   ನೇಣು ಹಾಕಿಕೊಂಡ ಸಂದರ್ಭದಲ್ಲಿ ಪೋಲಿಸರ ನೆರವಿನಿಂದ ದೇಹವನ್ನು ಸಾಗಿಸಿ, ಪರೀಕ್ಷಿಸಿ, ನಾಲಿಗೆಯು ಚಾಚಿಕೊಂಡಿದೆಯೆ ಇಲ್ಲವೆ ಎಂಬುದನ್ನು ದಾಖಲಿಸಬೇಕು.

   ದೇಹವನ್ನು ಗಂಡನ ಮನೆಯುವರು ತೆಗೆದುಕೊಂಡು ಹೋಗಿದ್ದರೆ, ಅವರನ್ನು ವಿವರಫಾದ ತನಿಖೆಗೆ ಗುರಿಮಾಡಬೇಕು. ಸುಟ್ಟುಕೊಂಡ ಪ್ರಕರಣದಲ್ಲಿ ಸ್ಥಳವನ್ನು ವಿವರವಾಗಿ ಪರಿಶೀಲನೆ ಮಾಡಬೇಕು.

3. ಪ್ರಾಥಮಿಕ ತನಿಖೆಯ ಮೊದಲು ದೇಹವು 'ಹೇಗಿತ್ತೊ ಹಾಗೆ' ಫೋಟೋವನ್ನು ತೆಗೆಯಬೇಕು. ದೇಹವನ್ನು ಮರಣೋತ್ತರ ಪರೀಕ್ಷೆಗೆ ಕಳಿಸಿದ ನಂತರ ಮನೆಯನ್ನು ಪರೀಕ್ಷಿಸಬೇಕು. ಸ್ಥಳೀಯ ಸಾಮಾಜಿಕ ಕಾರ್ಯಕರ್ತರ ಸಮ್ಮುಖದಲ್ಲಿ ಮನೆಯನ್ನು ತಪಾಸಣೆ ಮಾಡಬೇಕು.

4. ದೇಹ ಕಂಡುಬಂದ ಸ್ಥಳದ ವಿವರವವನ್ನು ವರದಿಯು ಒಳಗೊಂಡಿರಬೇಕು, ಬಾಗಿಲು, ಕಿಟಕಿ, ಸೀಲಿಂಗ್ ಎತ್ತರ, ಕಾಗದ ಪತ್ರಗಳು, ಡೈರಿ ಮುಂತಾದವುಗಳಿಗಾಗಿ ತಪಾಸಣೆ ನಡೆಸಬೇಕು. ಈ ಸಾವಿನ ಪ್ರಕರಣಗಳ ಖಾಸಗೀ ಸ್ವರೂಪವನ್ನು ಗಮನವಿಟ್ಟುಕೊಂಡು ವಿವರವಾದ ಸಾಂದರ್ಭಿಕ ಸಾಕ್ಷಿಗಳನ್ನು ಸಂಗ್ರಹಿಸಬೇಕು.

5. ವರದಿಗಳು ಕೇವಲ ಹೇಳಿಕೆಗಳ ದಾಖಲಾತಿಗಳಾಗಿರದೇ, ವಿವರವಾಗಿರಬೇಕು. ಸೂಕ್ಷ್ಮವಾದ, ಅಗತ್ಯವಾದ, ಸಾಕ್ಷಿಗಳನ್ನು ಸಂಗ್ರಹಿಸುವಲ್ಲಿ, ಹರಿದು ಹಂಚಿಹೋದ ಸಾಕ್ಷಿಗಳನ್ನು ಜೋಡಿಸುವಲ್ಲಿ, ವಿಮರ್ಶಾತ್ಮಕವಾಗಿರುವಲ್ಲಿ ಹೆಚ್ಚಿನ ತರಬೇತಿಯನ್ನು ನೀಡಬೇಕು.

6. ಪೂರಕವಾದ ಸಾಕ್ಷಿಗಳನ್ನು ನೆರೆ ಹೊರೆಯವರಿಂದ, ದುಡಿಯುವ ಸ್ತ್ರೀಯಾಗಿದ್ದರೆ ಸಹೋದ್ಯೋಗಿಗಳಿಂದ ಸಂಗ್ರಹಿಸಬೇಕು.

7. IPCಯ ಪ್ರಕಾರ ತಹಶೀಲ್ದಾರರ ಪಂಚನಾಮೆಯನ್ನು ನಡೆಸಬೇಕಾದುದರಿಂದ, ಬೆಂಗಳೂರು ನಗರ ಪ್ರದೇಶವನ್ನು 4 ಭಾಗಗಳಾಗಿ ವಿಂಗಡಿಸಬೇಕು. ಪ್ರತಿಯೊಂದು ವಿಭಾಗವನ್ನು ಒಬ್ಬ ತಹಶೀಲ್ದಾರರು ಪ್ರತಿನಿಧಿಸಬೇಕು. ಇದರಿಂದ ಕೆಲಸದ ಒತ್ತಡ ಕಡಿಮೆಯಾಗುತ್ತದೆ. ಅಥವಾ ಒಂದು ವರ್ಷದ ಅವಧಿಯವರೆಗೆ ಒಬ್ಬ ತಹಶೀಲ್ದಾರರನ್ನು ಪಂಚನಾಮೆ ಮಾಡುವ ಉದ್ದೇಶಕ್ಕಾಗಿಯೇ ನೇಮಿಸಬೇಕು. ಇವರು ಡೆಪ್ಯುಟಿ ಕಮಿಷನರಿಗೆ ಹಾಗೂ ಸಾಮಾಜಿಕ ಕಾಳಜಿಯನ್ನು ಸದಸ್ಯರ ಸಮಿತಿಗೆ ಆಧೀನರಾಗಿರಬೇಕು. ದೂರುಗಳು ಅಧಿಕವಾಗಿರುವುದರಿಂದ ಹಾಗೂ ಕೆಲಸದ ಒತ್ತಡದಿಂದ, ಕೆಲವೊಮ್ಮೆ ತಹಶೀಲ್ದಾರರಿಂದಲೇ ವಿಳಂಬ ಉಂಟಾಗುತ್ತದೆ. ಈ ವಿಳಂಬದಿಂದಾಗಿ ಕೆಲವೊಮ್ಮೆ ಎರಡು ದಿನಗಳವರೆಗೆ ದೇಹವನ್ನು ಮನೆಯಲ್ಲಿಯೇ ಇಡಲಾಗಿದೆ. ಇನ್ನೊಂದು ಕೇಸ್‌ನಲ್ಲಿ ಮರಣೋತ್ತರ ಪರೀಕ್ಷೆಗಾಗಿ ಶವಗಾರಗೆ ಕಳಿಸಿದ ನಂತರ ತಹಶೀಲ್ದಾರರು ಹೇಳಿಕೆಗಳನ್ನು ದಾಖಲು ಮಾಡಿಕೊಂಡ ನಿದರ್ಶನಗಳು ಇವೆ. ಬೇರೆಯವರು ಹೇಳಿಕೆಗಳನ್ನು ದಾಖಲು ಮಾಡಿ, ಕೇವಲ ತಹಶೀಲ್ದಾರರು ಸಹಿ ಮಾಡಿದ ಪ್ರಕರಣಗಳೂ ಇವೆ. ಪಂಚನಾಮೆ ನಡೆಯದೇ, ಮರಣೋತ್ತರ ಪರೀಕ್ಷೆಯನ್ನು ನಡೆಸಲು ಸಾಧ್ಯವಿಲ್ಲದ

ಕಾರಣ, ಅನಗತ್ಯವಾದ ವಿಳಂಬ ಉಂಟಾಗುತ್ತದೆ. ಇದರಿಂದ ಮಗಳನ್ನು ಕಳೆದುಕೊಂಡ ತಂದೆ ತಾಯಿಯರಿಗೆ ಅಪಾರವಾದ ತೊಂದರೆಯನ್ನು ನೀಡುತ್ತಾದೆ. ಕೆಲಸದ ಒತ್ತಡದಿಂದ ತಹಶೀಲ್ದಾರರು, ವೈದ್ಯರು ಆಸ್ಪತ್ರೆಯನ್ನು ಬಿಡುವ ವೇಳೆಗೆ ಬರುತ್ತಾರೆ. ಮಧ್ಯರಾತ್ರಿಯೆಲ್ಲಿ ಮಹಿಳೆ ಸತ್ತಿದರೆ, ಅವಳ ದೇಹವನ್ನು ಬೆಳಿಗ್ಗೆ ಆಸ್ಪತ್ರೆಗೆ ತರಲಾಗುತ್ತದೆ. ಶವವನ್ನು ಸಂಬಂಧಿಕರಿಗೆ ನೀಡುವಲ್ಲಿ 24 ಗಂಟೆ ವಿಳಂಬ ಉಂಟಾಗುತ್ತದೆ. ಕೆಲವೊಮ್ಮೆ ತಹಶೀಲ್ದಾರರು ವರದಿ ನೀಡುವಲ್ಲಿ ಉಂಟಾದ ವಿಳಂಬದಿಂದಾಗಿ ತನಿಖೆಯನ್ನು ಮುಂದುವರಿಸಲು ಅಸಾಧ್ಯವಾದ ನಿದರ್ಶನಗಳೂ ಇದೆ. ಶಿಲ್ಪಾಳ ಸಾವಿನ ತನಿಖೆ (ಜೂನ್ 1997)ಯೇ ಉತ್ತಮ ನಿದರ್ಶನ. ಶವಸಂಸ್ಕಾರದ ಕಾರ್ಯಗಳೆಲ್ಲವೂ ಮುಗಿದ ಮೇಲೆ ಹುಡುಗಿ ತಂದೆ-ತಾಯಿಯರ ಹೇಳಿಕೆಗಳನ್ನು ಬರಹದ ಮೂಲಕ ದಾಖಲು ಮಾಡಿಕೊಳ್ಳಬೇಕು. ಮಗಳನ್ನು ಕಳೆದುಕೊಂಡ ದುಃಖ ಹಾಗೂ ಆಘಾತದಲ್ಲಿ ಉತ್ತರಿಸಲು ಅಸಮರ್ಥರಾಗಿರುತ್ತಾರೆ. ಕೆಲವೊಮ್ಮೆ ವಿಭಿನ್ನ ರೀತಿಯ ಹೇಳಿಕೆಗಳನ್ನು ನೀಡಬಹುದು. ಹಾಗಾಗಿ ಇದು ಆರೋಪಿಯನ್ನು ಬಿಡುಗಡೆಗೊಳಿಸಲು ನೆರವಾಗುತ್ತದೆ.

8. ತಾವು ಸರಿಯಾಗಿ ಹೇಳಿಕೆಗಳನ್ನು ನೀಡಲು ಅಸಮರ್ಥವಾದಾಗ, ತಹಶೀಲ್ದಾರರು, ತನಿಖಾಧಿಕಾರಿಗಳು ಬೆದರಿಸಿದ ನಿದರ್ಶನಗಳಿವೆ. ಅಂತಹ ಸಂದರ್ಭದಲ್ಲಿ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಬೇಕು.

9. ಕಾನೂನಿನ ಪ್ರಕಾರ ಎಲ್ಲಾ ಪಂಚನಾಮೆಗಳನ್ನು ತಹಶೀಲ್ದಾರರೇ ಕಡ್ಡಾಯವಾಗಿ ನಡೆಸಿ, ವರದಿಗೆ ಸಹಿ ಮಾಡಬೇಕು. ಎಫ್.ಐ.ಆರ್.ನ್ನು ಓದಿ ಹೇಳುವ ಹಾಗೆ, ವರದಿಯನ್ನು ಸಂಬಂಧಪಟ್ಟವರಿಗೆ ಓದಿ ಹೇಳಿ, ಅವರಿಗೂ ಪ್ರತಿಯನ್ನೂ ನೀಡಬೇಕು. ಕೆಲವೊಮ್ಮೆ ನೀಡಿದ ಹೇಳಿಕೆಗಳಿಗಿಂತ, ದಾಖಲಾದ ಹೇಳಿಕೆಗಳೂ ವಿಭಿನ್ನವಾಗಿರುತ್ತವೆ.

10. ಪಂಚನಾಮೆದಲ್ಲಿ ದೇಹದ ಮೇಲಿನ ಗಾಯದ ಗುರುತುಗಳನ್ನು ವಿವರವಾಗಿ ನೀಡದಿದ್ದರೆ, ಕಠಿಣವಾದ ಶಿಕ್ಷೆಗೆ ಗುರಿ ಯಾಗಬೇಕು. ಸಾಧ್ಯವಿದ್ದಲ್ಲಿ ದೇಹದ ಪರೀಕ್ಷೆಯನ್ನು ಮಹಿಳಾ ಅಧಿಕಾರಿಯಿಂದ ಸಮಾಜ ಕಾರ್ಯಕರ್ತರ ಸಮ್ಮುಖದಲ್ಲಿ ನಡೆಯಬೇಕು.

11. ವಿವಾಹವಾಗಿ ಐದು ವರ್ಷದೊಳಗಿನ ಎಲ್ಲಾ ಅಸಹಜ ಸಾವುಗಳು ಸಿ.ಓ.ಡಿ.ಯ ತನಿಖೆಯ ವ್ಯಾಪ್ತಿಗೆ ಬರಬೇಕು.

12. ಸಿ.ಓ.ಡಿ. ತನಿಖೆಯು ಪ್ರಾಥಮಿಕ ಹಂತದಿಂದ ನಡೆಯಬೇಕು. ಸ್ಥಳೀಯ ಪೋಲಿಸರು ತನಿಖೆ ನಡೆಸುವ ಹಂತದಲ್ಲಿಯೇ ಹಲವಾರು ಪ್ರಮುಖ ಸಾಕ್ಷಿಗಳನ್ನು ಕೈಬಿಡಲಾಗುತ್ತದೆ. ನಂತರ ತನಿಖೆಯನ್ನು ಸಿ.ಓ.ಡಿ.ಗೆ ವರ್ಗಾವಣೆ ಮಾಡಲಾಗುತ್ತದೆ. ಕೆಲವೊಮ್ಮೆ F.I.R.ನ್ನು ಅಸಂಬದ್ಧವಾಗಿ ಬರೆಯಲಾಗುತ್ತದೆ. ವೈರುಧ್ಯಗಳನ್ನು, ವಿರೋಧಾಭಾಸಗಳನ್ನು ಕೊನೆಯ ಹಂತದಲ್ಲಿ ಸರಿಪಡಿಸಲು ಸಾಧ್ಯವಾಗುವುದಿಲ್ಲ. ಪೋಲೀಸರು ಸಿ.ಓ.ಡಿಯವರನ್ನು ದೂರುವುದು, ಸಿ.ಓ.ಡಿ.ಯವರು ಪೋಲೀಸರನ್ನು ದೂರುವುದು ನಡೆಯುತ್ತಲೇ ಇದೆ. ಈ ಪ್ರಕ್ರಿಯೆಯಲ್ಲಿ ಕೇಸ್‌ಗೆ ಹಾನಿಯುಂಟಾಗುತ್ತದೆ.

13. ದೂರು ನೀಡಿದ ಆರು ತಿಂಗಳೊಳಗೆ ಎಲ್ಲಾ ತನಿಖೆಯು ಮುಗಿಯಬೇಕು. ಫೋರೆನ್ಸಿಕ್ ವರದಿಯು ಅಗತ್ಯವಿದ್ದರೆ, ಅಂತಹವುಗಳಿಗೆ ಆದ್ಯತೆಯನ್ನು ಸಹ ನೀಡಬೇಕು.

14. ತನಿಖೆಯನ್ನು ಮುಗಿಸಿದ ನಂತರ, ಅದನ್ನು ಕುರಿತು ಹಾಗೂ ಯಾವ ನ್ಯಾಯಾಲಯಕ್ಕೆ ಕಳಿಸಲಾಗುತ್ತದೆಯೆಂಬುದನ್ನು ದೂರು ನೀಡಿದವರಿಗೆ ಮಾಹಿತಿಯನ್ನು ನೀಡಬೇಕು.

15. ತನಿಖೆ ನಡೆಸುವ ಅಧಿಕಾರಿ ದೂರು ನೀಡಿದವರಿಂದ ಏನನ್ನೂ ನಿರೀಕ್ಷಿಸದಂತೆ ಸೂಚನೆ ನೀಡಬೇಕು. ತನಿಖೆ ನಡೆಸುವ ಸಂದರ್ಭದಲ್ಲಿ ಅವರೊಡನೆ ಬರುವ ಇತರ (ಕಾಫಿ, ತಿಂಡಿ, ವಗೈರೆ) ಖರ್ಚು ವೆಚ್ಚ ಹೊರೆಯನ್ನು ಅವರ ಮೇಲೆ ಹೇರಬಾರದು.

16. ಪ್ರಾಮಾಣಿಕರಾದ, ಲಂಚ ತೆಗೆದುಕೊಳ್ಳದ, ದಕ್ಷ ಅಧಿಕಾರಿಗಳನ್ನು ಎರಡು ವರ್ಷಗಳವರೆಗೂ ಕೆಲಸ ಮಾಡಲು ಅವಕಾಶ ನೀಡಿ, ನಂತರ ಬದಲಾಯಿಸಬೇಕು.

17. F.I.R. ಪಂಚನಾಮೆ, ಫೋಟೊ, ಮರಣೋತ್ತರ ವರದಿ, ಸಿ.ಓ.ಡಿಯ ಸರ್ಟಿಫೈ ಮಾಡಿದ ವರದಿಯ ಪ್ರತಿಯು ದೂರು ನೀಡಿದವರಿಗೆ ದೊರೆಯಬೇಕು.

18. ಅನುಮಾನಸ್ಪದವಾದ ಸಾವುಗಳನ್ನು ಕುರಿತು ವಿವರವಾದ ವರದಿಯನ್ನು ನೀಡಬೇಕು. ಇಂತಹ ಕೇಸುಗಳಲ್ಲಿ ಹುಡುಗಿಯ ತಂದೆಯರು ಸೂಚಿಸುವ ವೈದ್ಯರ ಎದುರಿನಲ್ಲಿ ಮರಣೋತ್ತರ ಪರೀಕ್ಷೆಯನ್ನು (ಸ್ತ್ರೀಯರಾಗಿದ್ದರೆ ಒಳ್ಳೆಯದು) ಎದುರಿನಲ್ಲಿ ಸಂಬಂಧಪಟ್ಟ ಆಸ್ಪತ್ರೆಗಳಲ್ಲಿ ನಡೆಸಬೇಕು.

19. ಅಸಹಜ ಸಾವಿನ ಮರಣೋತ್ತರ ವರದಿಯನ್ನು ನೀಡುವ ಜವಾಬ್ದಾರಿಯನ್ನು ಒಂದು ನಿರ್ದಿಷ್ಟ ವಿಭಾಗಕ್ಕೆ ವಹಿಸಬೇಕು.

20. ವಿವಾಹವಾಗಿ ಐದು ವರ್ಷದೊಳಗಿನ ಸಾವುಗಳಲ್ಲಿ ಈ ಕೆಳಗಿನ ಸಾಕ್ಷಿಗಳು ಕಂಡುಬಂದ ಸಂದರ್ಭದಲ್ಲಿ 'ಕೊಲೆ' ಯೆಂದು ದಾಖಲಿಸಿಕೊಳ್ಳಬೇಕು.

* ಹುಡುಗಿಯು ಆತ್ಮಹತ್ಯೆಗೆ ನೂಕಿದ ಸನ್ನಿವೇಶದಲ್ಲಿ
* ಸಾವಿನ ಅಡಿಗೆ ತಳ್ಳುವ ಉದ್ದೇಶ ಹೊಂದಿದ ಸಾಕ್ಷಿಗಳು ದೊರೆತಾಗ
* ಹಿಂದೆ ಹೆಂಡತಿಗೆ ಹಿಂಸೆ ನೀಡಿದ ನಿದರ್ಶನಗಳೂ ಇದ್ದರೆ, ಸಮಸ್ಯೆಯನ್ನು ಪರಿಹರಿಸಲು ಪೋಲೀಸ್ ಠಾಣೆಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಪಂಚಾಯಿತಿಗಳನ್ನು ನಡೆಸಿದ ಸಂದರ್ಭಗಳಲ್ಲಿ.

21. ಎಲ್ಲಾ ವರದಕ್ಷಿಣೆಯ ಸಾವುಗಳನ್ನು ಕೊಲೆಗಳೆಂದು ದಾಖಲಿಸಬೇಕು. ಮದುವೆಯಾಗಿ ಐದು ವರ್ಷದೊಳಗಿನ, ವಿಶೇಷವಾಗಿ ಒಂದು ವರ್ಷದೊಳಗೆ ಉಂಟಾಗುವ ಸಾವುಗಳನ್ನು ಕೊಲೆಯೆಂದು ದಾಖಲಿಸಬೇಕು.

22. ಒಂದು ನಿರ್ದಿಷ್ಟ ಜನಾಂಗದವರಿಗೆ ಅಥವಾ ಕುಟುಂಬದ ಸದಸ್ಯರಿಗೆ ಕೇಸನ್ನು ನಡೆಸುವ ಆಸಕ್ತಿ ಇಲ್ಲದಿದ್ದರೂ, ಬಲವಾದ ಸಾಕ್ಷ್ಯ ಪುರಾವೆಗಳು ಕಂಡುಬಂದಲ್ಲಿ ನೆರೆಹೊರೆಯವರು, ಮಹಿಳಾ ಸಂಘ ನೀಡುವ ದೂರಿನ ಆಧಾರದ ಮೇಲೆ ದೂರನ್ನು ದಾಖಲಿಸಿಕೊಳ್ಳಬೇಕು.

23. ಹೆಂಡತಿಯ ಸಾವಿನ ನಂತರ ಗಂಡನ ನಡತೆಯನ್ನು ವಿಶೇಷವಾಗಿ ಗಮನಿಸಬೇಕು. ಜೊತೆಗೆ ಅದನ್ನು ಬಲವಾದ ಸಾಕ್ಷಿಯನ್ನಾಗಿ ಉಪಯೋಗಿಸಬೇಕು. ಆರೋಪಿಯು ಸಾಮಾನ್ಯವಾಗಿ ತಪ್ಪು ಮಾಹಿತಿಯನ್ನು ನೀಡುತ್ತಾನೆ ಅಥವಾ ಇದ್ದಕ್ಕಿದ್ದಂತೆ ಮನೆಯಿಂದ ಕಾಣೆಯಾಗುತ್ತಾನೆ.

24. ಅಸಹಜವಾದ ಪ್ರಕರಣಗಳಿಗಾಗಿ ವಿಶೇಷ ನ್ಯಾಯಾಲಯವನ್ನು ರಚಿಸಬೇಕು. ಒಂದು ವರ್ಷದೊಳಗೆ ಎಲ್ಲಾ ಕೇಸುಗಳನ್ನು ಇತ್ಯರ್ಥಗೊಳಿಸಬೇಕು.

25. ಅಸಹಜ ಸಾವಿನ ಪ್ರಕರಣದಲ್ಲಿ ಚಾರ್ಜ್‌ಶೀಟನ್ನು ಸಲ್ಲಿಸುವವರೆಗೆ ಆರೋಪಿಗೆ ಜಾಮೀನು ನೀಡಬಾರದು.

26. ನ್ಯಾಯಾಂಗದ ವಶದಲ್ಲಿರುವಾಗ ಆರೋಪಿಯನ್ನು ಸಾಮಾನ್ಯ ಕೈದಿಯೆಂದೇ ಪರಿಗಣಿಸಬೇಕು.

27. ಮದುವೆಯಾಗಿ 5/7 ವರ್ಷದೊಳಗಿನ ಎಲ್ಲಾ ಆತ್ಮಹತ್ಯೆ ಪ್ರಕರಣಗಳನ್ನು '498A' ವ್ಯಾಪ್ತಿಗೆ ತರಬೇಕು. ಹೆಂಡತಿಗೆ ನೀಡಿದ ಹಿಂಸೆಗೂ ಆತ್ಮಹತ್ಯೆಗೂ ಸಂಬಂಧವನ್ನು ಕಲ್ಪಿಸಬೇಕು.

ಸುಟ್ಟ ಪ್ರಕರಣಗಳಲ್ಲಿ ನೀಡುವ "ನನ್ನ ಸಾವಿಗೆ ಯಾರೂ ಕಾರಣವಲ್ಲ". ಸಾವಿನ ಸಂದರ್ಭದಲ್ಲಿ ನೀಡುವ ಹೇಳಿಕೆಯನ್ನು ಒಪ್ಪಿಕೊಳ್ಳಬಾರದು. ಏಕೆಂದರೆ ಈ ಹೇಳಿಕೆಯನ್ನು ಅವಳ ಮೇಲೆ ಹೇರಿದ ಒತ್ತಡದಿಂದ ಪಡೆಯಲಾಗಿರುತ್ತದೆ.

28. ಹೊಟ್ಟೆ ನೋವು, ಎದೆ ನೋವು, ಮಾನಸಿಕ ಅಸ್ವಸ್ಥತೆ ಮುಂತಾದವುಗಳಿಗೆ ಸೂಕ್ತವಾದ ದಾಖಲೆಗಳು ಕಂಡು ಬರದೇ ಇದ್ದಾಗ ತನಿಖೆಗೆ ಒಳಪಡಿಸಬೇಕು.

29. ಸ್ತ್ರೀಯರ ಮೇಲೆ ಹಿಂಸೆ, ಕಿರುಕುಳ ನೀಡುತ್ತಿರುವವರು ಅಪರಾಧಿಗಳೆಂದು ಸಾಬೀತಾದವರಿಗೆ ಚುನಾವಣೆಗೆ ಸ್ಪರ್ಧಿಸುವ, ಮತ ನೀಡುವ ಅವಕಾಶ ನೀಡಬಾರದು: ಪಾಸ್‌ಪೋರ್ಟ್, ರೇಶನ್ ಕಾರ್ಡ್ ಮುಂತಾದವುಗಳನ್ನು ವಾಪಸ್ಸು ಪಡೆಯಬೇಕು.

30. ಸುಟ್ಟ ಗಾಯಗಳ ಮೇಲ್ವಿಚಾರಣೆಗೆ ಒಂದು ಸಮಿತಿಯನ್ನು ರಚಿಸಬೇಕು.

31. ಸುಟ್ಟಗಾಯದ ವಾರ್ಡ್‌ನ್ನು ಉತ್ತಮಗೊಳಿಸಬೇಕು. ಸಾವು ಬದುಕಿನ ನಡುವೆ ಹೋರಾಟ ನಡೆಸುತ್ತಿರುವ ಸಂದರ್ಭದಲ್ಲಿ ಪ್ರಾಣ ಉಳಿಸಲು ಆದ್ಯತೆಯನ್ನು ಬೇಕೇ ವಿನಃ ಸಾವನ್ನು ಖಚಿತಡಿಸುವುದಲ್ಲ.

32. ತನಿಖೆಯ ಎಲ್ಲಾ ಹಂತಗಳಲ್ಲಿ ನೆರವು ನೀಡುವ, ಸಮಾಜ ಕಾರ್ಯಕರ್ತರದು, ವೈದ್ಯರು, ಸ್ಥಳೀಯ ವ್ಯಕ್ತಿಗಳನ್ನು ಒಳಗೊಂಡಂತೆ ಒಂದು ಸಮಿತಿಯನ್ನು ರಚಿಸಬೇಕು.

33. ತನಿಖೆಯ ಎಲ್ಲಾ ಹಂತವನ್ನು ಮೇಲ್ವಿಚಾರಣೆ ಮಾಡಲು ಅಧಿಕಾರಿಗಳು ಸ್ವಯಂಸೇವಾ ಸಂಸ್ಥೆಯ ಸದಸ್ಯರನ್ನು ಒಳಗೊಂಡಂತೆ ಒಂದು ಸಲಹಾ ಸಮಿತಿಯನ್ನು ನೇಮಿಸಬೇಕು.

32. ಬಲಾತ್ಕಾರದ ಸಾವಿನ ಪ್ರಕರಣಗಳಲ್ಲಿ ಸರಕಾರ ನೊಂದ ತಂದೆ-ತಾಯಿಯರಿಗೆ ಪರಿಹಾರವನ್ನು ನೀಡಬೇಕು. ಈ ಪರಿಹಾರದ ಮೊತ್ತವನ್ನು ಆರೋಪಿಯಿಂದ ವಸೂಲು ಮಾಡಬಹುದು.

33. ದಂಡವನ್ನು ಸಂಗ್ರಹಿಸಲು ಹಾಗೂ ಅದನ್ನು ಸೂಕ್ತವಾಗಿ ವಿತರಿಸಲು ಕಾನೂನುಬದ್ಧ ಸಮಿತಿಯನ್ನು ನೇಮಕ ಮಾಡಬೇಕು.

34. ಹೆಂಡತಿಯರನ್ನು ಕೊಲೆ ಮಾಡಿದ ಅಪರಾಧಿಗಳ ಫೋಟೋಗಳನ್ನು ಪೋಲೀಸ್ ಠಾಣೆಗಳಲ್ಲಿ, ತಹಶೀಲ್ದಾರರ ಕಛೇರಿಗಳಲ್ಲಿ, ದೂರದರ್ಶನಗಳಲ್ಲಿ ಪ್ರಕಟಿಸಬೇಕು.

●

# ಈ ಸಲದ ಚಳಿಗಾಲಕ್ಕೆ ಸಬರರ ಮೇಳವಿಲ್ಲ

- ಮಹಾಶ್ವೇತಾದೇವಿ

ಪೋಲೀಸರು ಆದಿವಾಸಿಯೊಬ್ಬನನ್ನು ಬಲಿತೆಗೆದುಕೊಂಡ ದಾರುಣ ಘಟನೆಯನ್ನು ಮಹಾಶ್ವೇತಾದೇವಿಯವರು ದಾಖಲಿಸಿದ್ದಾರೆ. ಮುಗ್ಧ ಆದಿವಾಸಿಗಳು ಬಲಿಯಾಗುತ್ತಿರುವುದನ್ನು ವಿರೋಧಿಸಲು ಕರೆ ನೀಡಿದ್ದಾರೆ.

ಅಕಾರ್‌ಬೈದ್ ಎಂಬುದೊಂದು ಹಳ್ಳಿ. ಕೆಂಡಾ ಪೋಲಿಸ್ ಠಾಣೆ. ಜಿಲ್ಲೆ ಪುರುಲಿಯಾ. ಸುಮಾರು 37 ಸಬರ್ ಕುಟುಂಬಗಳು. ಯಾರಿಗೂ ಒಂದಿಂಚು ಉಳುವ ಭೂಮಿಯಿಲ್ಲ. ಗಂಡಸರು ಹೆಂಗಸರು, ಮಕ್ಕಳು ಸೇರಿ ಒಟ್ಟು ಜನಸಂಖ್ಯೆ 139. ಅಕಾರ್ ಬೈದ್ ಸಬರರು ಯಾರಿಗೂಬಗ್ಗದ ಗಟ್ಟಿಗ. ಪೋಲಿಸರ ಬೇಟೆಗೆ ದಕ್ಕದ ಜಾಗ ಆದರೂ ಕಳೆದ 5 ವರ್ಷಗಳಲ್ಲಿ 11 ಜನರ ಬಂಧನವಾಗಿದೆ. ಕೆಲವರ್ಷಗಳ ಹಿಂದೆ ಅಜನ್ ಸಬರ್‌ನನ್ನು ಕೊಲ್ಲಲಾಯ್ತು.

ಬೂಧಾನ್ ಸಬರ್ ಅಕಾರ್ ಬೈದ್‌ನವ. ದಿನಕ್ಕೆ ೫ ರಿಂದ ೧೦ ರೂಪಾಯಿ ಕೂಲಿಗೆ ಬೇರೆಯವರ ಜಮೀನಿನಲ್ಲಿ ದುಡಿಯುವುದು ಮುಖ್ಯ ಆದಾಯ. ಆದರೆ ಪುರಲಿಯಾ ಒಂದೆ ಬೆಳೆ ತೆಗೆಯುವ, ಬರ ಪೀಡಿತ ಪ್ರದೇಶ. ಅಲ್ಲಿ ಸಬರರು ಪಶ್ಚಿಮ್‌ಬಂಗಕೆರಿಯಾ ಸಬರ್ ಕಲ್ಯಾಣ್ ಸಮಿತಿ ಸಹಾಯದಿಂದ ಕರಕುಶಲ ವಸ್ತುಗಳ ತಯಾರಿಕೆಯನ್ನು ಕಲಿತುಕೊಂಡರು. ನಿಧಾನವಾಗಿ ಅವರ ಆದಾಯ ಕೊಂಚ ಸುಧಾರಿಸಿತು. ಸಮಿತಿಯ ಸಹಾಯದಿಂದ ಕೆರೆಯನ್ನು ತೋಡಲಾಯಿತು. ಸಮುದಾಯ ಗುಡಿಸಲನ್ನು ಕಟ್ಟಲಾಯ್ತು. ಗಾಯತ್ರಿ ಸ್ಪಿವಾಕ್ ಅವರ ಸಹಕಾರದಿಂದ ಶಾಲೆಯನ್ನು ಪ್ರಾರಂಭಿಸಲಾಯ್ತು. ಮಕ್ಕಳಿಗೆ ಮಧ್ಯಾಹ್ನದ ಊಟ ದೊರೆಯಿತು ಅಕಾರ್‌ಬೈದ ಗಾಯತ್ರಿಯವರಿಗೆ ಎರಡನೆ ಮನೆಯಿದ್ದಂತೆ. ಆಕೆ ಅವರಿಗೆಲ್ಲ ಅಚ್ಚು ಮೆಚ್ಚಿನ ಅಕ್ಕ. ಗಾಯತ್ರಿ ಸಬರ ಮಹಿಳೆಯೊಂದಿಗೆ ಇದ್ದು ಅವರೊಡನೆ ಕೆಲಸ ಮಾಡುತ್ತಾರೆ ಮತ್ತು ಓದಲು, ಬರೆಯಲು ಕಲಿಸುತ್ತಾರೆ.

ಇವೆಲ್ಲವು ಪೋಲಿಸರಿಗೆ ಅಸಹನೆ ಹುಟ್ಟಿಸಿತು. ೫-೬ ಸಮುದಾಯದ ಗುಡಿಸಲುಗಳಿಗೆ ಸಬರರ ಹೆಸರನ್ನು ಇಟ್ಟಿದ್ದು ಪೋಲಿಸರಿಗೆ, ಜಿಲ್ಲೆಯ ಜನರಿಗೆ ರಾಜಕೀಯ ವ್ಯಕ್ತಿಗಳಿಗೆ ತಾಳಿಕೊಳ್ಳಲಾಗಲಿಲ್ಲ. ಅವರು 'ಸಬರರಿಗೆ ಪಾಠ ಕಲಿಸಬೇಕು' ಎನ್ನುತ್ತಾರೆ. ಈ ವಿವರಣೆಯನ್ನು ಪಶ್ಚಿಮ ಬಂಗಾಳ ಬುದಾನ್ ಅಥವಾ ಇನ್ನಾವುದೆ ಅಧಿಸೂಚನೆಯಿಂದ ತೆಗೆದು ಹಾಕಿದ ಆದಿವಾಸಿಯ ಸಾವಿನ ಹಿಂದೆ ಕೇಳಬಹುದು.

1977ರಲ್ಲಿ ಎಡಪಂಥದ ಸರ್ಕಾರ ರಚನೆಯಾಯ್ತು. ಬುಧಾನ್ ಸಬರನಿಗೆ ಆಗ 30 ವಯಸ್ಸು ಹೆಂಡತಿ ಶ್ಯಾಮಲಿ ಮತ್ತು ಮಕ್ಕಳೊಂದಿಗೆ ಅವನು ಸಂತೋಷವಾಗಿದ್ದ. ಕರಕುಶಲ ವಸ್ತುಗಳನ್ನು ಚೆನ್ನಾಗಿ ಮಾಡುತ್ತಿದ್ದ ಅವರು ಕೊಂಚಗಳಿಸುತ್ತಿದ್ದರು. ನಕ್ಕು ನಲಿದು ಹಾಡಿ ಕುಣಿಯುತ್ತಿದ್ದರು.

ದಿನಾಂಕ 10.2.98ರಂದು ಬುಧಾನ್ ಶ್ಯಾಮಿಲಿಯೊಂದಿಗೆ ಸೈಕಲ್ ಮೇಲೆ ಸಂಬಂಧಿಯಬ್ಬರನ್ನು ನೋಡಲು ಹೊರಟಿದ್ದ (ಸಬರನೊಬ್ಬ ಸೈಕಲ್ ಮೇಲೆ! ಆ ಜಾಗ ಬಾರಾಬಜರ ಪೋಲಿಸ್ ಠಾಣೆ ವ್ಯಾಪ್ತಿಗೆ ಸೇರಿತ್ತು. ಅಲ್ಲಿದ್ದ ಅಧಿಕಾರಿ ಸಬರರನ್ನು ಎಷ್ಟು ಅಮಾನವೀಯವಾಗಿ ನಡೆಸಿಕೊಳ್ಳುತ್ತಿದ್ದನೆಂಬುದು ಜನಜನಿತವಾಗಿತ್ತು. ಇನ್ನೊಬ್ಬ ಅಧಿಕಾರಿಯೊಂದಿಗೆ ಸಬರರ ಹಳ್ಳಿಯ ಮೇಲೆ ದಾಳಿಮಾಡಿ ಶಾಂತಿ ಸಬರಳೆಂಬ ಮಹಿಳೆಯೊಬ್ಬಳನ್ನು ಹೊಡೆದು ಸಾಯಿಸಿದ್ದು. ಬಂದೂಕು ತೋರಿಸಿ ಬೆದರಿಸಿ ಆಕೆಯ ಶವವನ್ನು ಸುಡಿಸಿದ್ದ. ಈ ಕಾರಣಕ್ಕಾಗಿ 1992ರಲ್ಲಿ ಅವನಿಗೆ ಇನ್ನೊಂದು ವಿಭಾಗಕ್ಕೆ ವರ್ಗವಾಗಿತ್ತು. ಸಬರರಿಗೆ ಬಂದೂಕಿನ ತುದಿಗುರಿ ಇಡುವುದು ಅವನಿಗೆ ಬಲು ಇಷ್ಟ.

ಸಬರರು ಸಮಿತಿಯ ಮೇಲೆ ಹೆಚ್ಚು ಅವಲಂಬಿತವಾಗುತ್ತಿರುವ ವಿಷಯವನ್ನು ತಾಳಿಕೊಳ್ಳದವರೇ ಯಾರೊ ಆ ವ್ಯಕ್ತಿಯನ್ನು ಪುನಃ ಬಾರಾ ಬಜಾರ್ ಪೋಲಿಸ್ ಠಾಣೆಗೆ ಬರುವಂತೆ ಮಾಡಿದ್ದಾರೆ ಎಂಬುದು ನನಗೆ ಖಚಿತವಾಗಿದೆ. ಯಾಕೆಂದರೆ ಸಮಿತಿಯು ಸಬರರ ಮೇಲಿನ ದೌರ್ಜನ್ಯವನ್ನು ವಿರೋಧಿಸುತ್ತವೆ ಅದರ ವಿರುದ್ಧ ಹೋರಾಡುತ್ತದೆ.

ಬುಧಾನ್ ಮತ್ತು ಶ್ಯಾಮಲಿ ಪಾನ್‌ಶಾಪಿನಲ್ಲಿದ್ದರು. ಮಾಮೂಲಿ ಉಡುಪಿನಲ್ಲಿದ್ದ ನಾಲ್ಕು ಜನ ಬುಧಾನ್‌ನನ್ನು ಎಳೆದುಕೊಂಡು ಮರೆಯಾದರು. ಆದಿನ ತಾರೀಖು 10.2.98 ದಿನಾಂಕ 18.2.98ರಂದು ಬೆಳಗ್ಗೆ ಪುರುಲಿಯಾ ಸದರ್ ಜೈಲಿನಲ್ಲಿ ಬುಧಾನ್ ಸಬರ ನೇಣುಹಾಕಿಕೊಂಡನೆಂದು ಫೋನಿನಲ್ಲಿ ತಿಳಿಯಿತು. ಅವನ ಶವಪರೀಕ್ಷೆ ನಡೆದು ಪೋಲಿಸರು ಹೆಣವನ್ನು ಕೂಡಲೆ ಸುಡಲು ಒತ್ತಾಯಿಸುತ್ತಿದ್ದಾರೆಂದು ತಿಳಿಯಿತು.

ಮಾಹಿತಿಯ ಮೂಲವನ್ನು ನಾನು ಬಹಿರಂಗ ಪಡಿಸಲಾರೆ. ಸಮಿತಿ ಶ್ಯಾಮಲಿಯೊಂದಿಗಿತ್ತು. ಬುಧಾನನ ದೇಹವನ್ನು ಅಕಾರ್ ಬೈದ್‌ಗೆ ತೆಗೆದುಕೊಂಡು ಹೋಗಿ ಹೂಳಲಾಯಿತು ಕಲ್ಕತ್ತಾದ ಹೈಕೋರ್ಟಿನಲ್ಲಿ ನಾನು ಮೊಕದ್ದಮೆ ಹೂಡಿದೆ. ಶವವನ್ನು

ಹೊರತೆಗೆದು ಮತ್ತೆ ಶವ ಪರೀಕ್ಷೆ ನಡೆಸಿ ಅದರ ವಿಡಿಯೋಚಿತ್ರಣ ಮಾಡಬೇಕೆಂದು ಒತ್ತಾಯಿಸಿದೆ. ಆದರೆ 18.2.98ರ ನಂತರ ಪೋಲಿಸರು ಅಕಾರ್‌ಬೈದ್‌ನ ಮೇಲೆ ದಾಳಿಯಿಟ್ಟು ಲೂಟಿ ಮಾಡಿದರು ಸುಡಲು ಚಿತ್ತಾಯಿಸಿದರು. ಸಬರರು ಹುಲ್ಲಿನಲ್ಲಿ ಬುಧಾನ್‌ನ ಬೊಂಬೆ ಮಾಡಿ ಸುಟ್ಟು ಶವವನ್ನು ಬೇರೆಡೆಗೆ ಸಾಗಿಸಿದರು.

ಈ ಭಾರಿ ಬುಧಾನ್‌ನ ಗುಡಿಸಲೊಳಗೆ ಗುಂಡಿತೋಡಿ ದೇಹವನ್ನು ಹೂತರು. ಶ್ಯಾಮಿಲಿ ಗೋರಿಯ ಮೇಲೆ ಮಲಗಿದಳು. ಸುಟ್ಟು ಹಾಕಿರುವ ಶವವನ್ನು ಮತ್ತೊಮ್ಮೆ ಪರೀಕ್ಷೆಗೊಳಪಡಿಸಬೇಕೆಂದು ಹೈಕೋರ್ಟ್ ಆದೇಶ ನೀಡಿದಾಗ ಪೋಲೀಸರಿಗೆ ಗಲಿಬಿಲಿ. ವಿಚಾರಣೆ ಇನ್ನೂ ನಡೆಯುತ್ತಿದೆ. ಕಲ್ಕತ್ತಾದ ಮಾನವ ಹಕ್ಕುಗಳ ಆಯೋಗದ ಕಾರ್ಯಕ್ಕೆ ನಾವು ಖುಶಿಯಾಗಿದ್ದೇವೆ. ನಾನು ಅವರನ್ನು ಹುಡುಕಿಕೊಂಡು ಹೋಗದೆಯೇ ಅವರೇ ಮುಂದೆ ಬಂದು ಸಹಾಯ ಮಾಡಿದರು.

ದಿನಾಂಕ 10.2.98ರಂದು ಬುಧಾನ್‌ನನ್ನು ಬಾರಾಬಜಾರ್ ಪೋಲಿಸ್‌ಠಾಣೆಗೆ ಒಯ್ಯಲಾಯಿತು. ಚೆನ್ನಾಗಿ ಥಳಿಸಿ ದಿನಾಂಕ 12.2.98ರಂದು ಕೋರ್ಟಿನಲ್ಲಿ ಹಾಜರುಪಡಿಸಲಾಯ್ತು. ಡಕಾಯಿತಿ ಕುರಿತಂತೆ ಮುಂದಿನ ವಿಚಾರಣೆಗಾಗಿ ಮತ್ತೊಮ್ಮೆ ಠಾಣೆಗೆ ಕಳಿಸಲಾಯ್ತು. ಪುರಲಿಯಾದಲ್ಲಿ ಕಳೆದ 5 ರಿಂದ 7 ವರ್ಷಗಳಲ್ಲಿ ನಡೆದ ಎಲ್ಲಾ ಡಕಾಯಿತಿ ಬಗ್ಗೆ ಬುಧಾನ್ ತಪ್ಪೊಪ್ಪಿಗೆ ನೀಡಿರಬೇಕು. ದಿನಾಂಕ 16.2.98ರಂದು ಅವನನ್ನು ಕೋರ್ಟಿನಲ್ಲಿ ಹಾಜರು ಪಡಿಸಲಾಯ್ತು. ನಂತರ ಜೈಲಿಗೆ ಕಳಿಸಲಾಯ್ತು. ಜೈಲಿನೊಳಗೆ ಇತರೆ ಖೈದಿಗಳು ಅವನ ಸ್ಥಿತಿಯನ್ನು ಗಮನಿಸಿದರು. ಅದೊಂದು ಪಕ್ಕಾವೃತ್ತಿನಿರತನ ಕಲಸವೇ ಆಗಿದ್ದು ಸಾಕಷ್ಟು ಪರಿಣಿತಿ ಬೇಕಾಗುತ್ತದೆ. ಒಂದು ಕಂಬಳಿಯೊಳಗೆ ಗಟ್ಟಿಯಾಗಿಸುತ್ತಿ ಹೊಡೆಯುತ್ತಲೇ ಇರುವುದು. ಈ ಕಂಬಳಿ ಹೊಡೆತದ ಸ್ವಾರಸ್ಯವೆಂದರೆ ಗುರುತು ಬೀಳುವುದೇ ಇಲ್ಲ. ಈ ಕಲೆಯ ನಿಜವಾದ ಪಾಂಡಿತ್ಯ ಪಡೆದವನು ಹಸಿವಿಲ್ಲಿ ನರಳಿಸಿ ನಂತರ ಕೊಂಚ ತಿನ್ನಲು ನೀಡುವನು. ಅಪರಾಧಿ, ತಪ್ಪು ಒಪ್ಪಿಕೊಂಡಾಯಿತಲ್ಲ ಇನ್ನೇನು ತನ್ನನ್ನು ಕಳಿಸಿಬಿಡಬಹುದೆಂದು ಕೊಳ್ಳುವಾಗಲೇ ಹೊಡೆತ ಪ್ರಾರಂಭಿಸುವನು.

ದಿನಾಂಕ 10.2.98 ರಿಂದ 16.2.98ರವರೆಗೆ ಬುಧಾನ್ ಲಾಕಪ್ಪಿನಲ್ಲಿದ್ದ. ಒಂದು ರಾತ್ರಿ ಜನರಿಂದ ತುಂಬಿದ್ದ ಸೆಲ್‌ನಲ್ಲಿದ್ದ. ಮರುದಿನ ಗುಡಿಸಲು ಅಥವಾ ಸಾರಿಸಲು ಎಳೆದುಕೊಂಡು ಹೋಗಿರುತ್ತಾರೆ ನಂತರ ಒಂಟಿ ಕೋಣೆಲ್ಲಿಟ್ಟಿದ್ದಾರೆ. ಇಡೀದಿನ ಕೋಣೆಗೆ ಬೀಗ ಹಾಕಲಾಗಿತ್ತು. ಕೆಟ್ಟ ಬುಧಾನ್ ಉಣ್ಣಲಿಲ್ಲ, ನೀರು ಕುಡಿಯಲಿಲ್ಲ. ಸಂಜೆ ಅವನು ತಾನೇ ನೇಣು ಹಾಕಿಕೊಂಡನೆಂದು ತಿಳಿಯಿತು.

ನಾನು ಮೊಕದ್ದಮೆ ಹೂಡಿರುವೆ. ನಾನೀಗ ಎದೆಯ ಮೇಲೆ ಬುಧಾನ್ ದೇಹದ ಹೊರೆ ಹೊರಬೇಕಾಗಿದೆ. ನಾನೇಕೆ ಅವನ ಸತ್ತ ಶವದ ವಾಸನೆ ಹೊಡೆಯುತ್ತಿಲ್ಲವೆಂದು ಆಶ್ಚರ್ಯಪಡುತ್ತಿರುವೆ. ನನ್ನನ್ನೆ ನಾನು ಶಪಿಸಿಕೊಂಡೆ ಈಗಲೂ ಶಪಿಸಿಕೊಳ್ಳುತ್ತಿರುವೆ. ಅನೇಕ ಲೋಧ, ಕೇರಿಯರು ಕೊಲೆಯಾದಾಗ ನಾನೇಕೆ ಮೊಕದ್ದಮೆ ಹೂಡಲಿಲ್ಲ?

13.3.98ರಂದು ಬರೋಡಾಗೆ ಹೋದೆ. ಮರುದಿನ ಸಂಜೆ ಭಾಷಾ ಸಂಶೋಧನೆ ಕೇಂದ್ರದವರು ಏರ್ಪಡಿಸಿದ್ದ ವೆರ್‍ರಿಯರ್ ಎಲ್ವಿನ್ ಉಪನ್ಯಾಸದಲ್ಲಿ ನಾನು ಅಧಿಸೂಚನೆಯಿಂದ ತೆಗೆಯಲ್ಪಟ್ಟ ಆದಿವಾಸಿಗಳ ಬಗ್ಗೆ ಮಾತನಾಡಿದೆ. ಅಂದು ಅಧಿಸೂಚನೆಯಿಂದ ತೆಗೆಯಲ್ಪಟ್ಟ ಮತ್ತು ಅಲೆಮಾರಿ ಆದಿವಾಸಿಗಳ ಹಕ್ಕುಗಳ ಗುಂಪನ್ನು ಪ್ರಾರಂಭಿಸಲಾಯ್ತು. ಈ ಯುದ್ಧವನ್ನು 1947ರಲ್ಲೆ ಪ್ರಾರಂಭಿಸಬೇಕಿತ್ತು. ಮೊದಲನೇ ಯುದ್ಧ ನಡೆಯಲೇ ಇಲ್ಲ. ಎರಡು ಕೋಟಿಗಿಂತಲೂ ಹೆಚ್ಚಿನ ಜನರನ್ನು ಹುಟ್ಟು ಅಪರಾಧಿಗಳೆಂದು ನೋಡಿಕೊಳ್ಳಲಾಯ್ತು. ಭಾರತ ಇನ್ನೂ ತನ್ನ ಸ್ವಾತಂತ್ರ್ಯವನ್ನು ಆಚರಿಸಿಕೊಳ್ಳುತ್ತಿದೆ. ನಾವು ಬರೆಯುತ್ತೇವೆ, ಚಿತ್ರ ರಚಿಸುತ್ತೇವೆ, ಶಿಲ್ಪ ರಚಿಸುತ್ತೇವೆ, ಉಪನ್ಯಾಸಗಳನ್ನು ಏರ್ಪಡಿಸುತ್ತೇವೆ. ಪಶ್ಚಿಮ ಬಂಗಾಳದ ಯೋಧರು, ಕೆರಿಯರು ದೆಕಾಸರು ಅಮಾನವೀಯ ಹಿಂಸೆ, ದೌರ್ಜನ್ಯ ಕಿರುಕುಳಕ್ಕೆ ಒಳಗಾಗುತ್ತಿದ್ದಾರೆ. ಕೊಲೆಯಾಗುತ್ತಿದ್ದಾರೆ ಕಲ್ಕತ್ತಾದಲ್ಲಿರುವ ನಮಗೆ ಇವು ಯಾವುದು ಪರಿಣಾಮ ಬೀರುವುದೇ ಇಲ್ಲ. ಸ್ವಾತಂತ್ರ್ಯದ ಉತ್ಕೃಷ್ಟ ಸೌಲಭ್ಯ, ಸವಲತ್ತುಗಳನ್ನು ಅನುಭವಿಸುವ ಜನಕ್ಕೆ ತಟ್ಟುವುದೇ ಇಲ್ಲ. ನಾನೇನೂ ಇದಕ್ಕೆ ಹೊರತಲ್ಲ ನಾನೂ ಆ ವರ್ಗಕ್ಕೆ ಸೇರಿದವಳೆ.

ಪರ್ದಿ ಗುಡಿಸಲುಗಳು ಉರಿದು ಹೋಗುತ್ತವೆ. ವಾರ್ಷಿಕ ಕಾರ್ಯಸೂಚಿ ಬರುತ್ತದೆ. ಮಹಾರಾಷ್ಟ್ರದ ಕೋರ್ಕು ಆದಿವಾಸಿಗಳು ಹಿಂಗಿ ಹೋಗಿ ಮೂಳೆ ಚಕ್ಕಳವಾಗುತ್ತಾರೆ. ಆದರೆ ಬಾಂಬೆ ಮಹಾನಗರ ಕ್ಯಾರೆ ಎನ್ನುವುದಿಲ್ಲ. ಆದರೆ ಯುದ್ಧ ಆರಂಭವಾಗಿದೆ. ಇಂಡಿಯಾದ ಜನ ನಮ್ಮ ಗೋಡೆ ಬರಹಗಳನ್ನು ಓದಿ ನಮ್ಮೊಂದಿಗೆ ಸೇರಲು ಬರುವರೆಂಬ ನಂಬಿಕೆ ನಮಗಿದೆ. ನಮಗೆ ಸಿಕ್ಕಿರುವ ಸ್ವಾತಂತ್ರ್ಯ ನಿಜವಾದ ಸ್ವಾತಂತ್ರ್ಯವಲ್ಲವೆಂದು ಅಲೆಮಾರಿ, ಅಧಿಸೂಚಿಯಿಂದ ತೆಗೆಯಲ್ಪಟ್ಟ ಆದಿವಾಸಿಗಳು ರುಜುವಾತು ಪಡಿಸಿದ್ದಾರೆ. ಹೌದು ಇದೊಂದು ದೀರ್ಘಯುದ್ಧ ಆದರೆ ಗೆಲ್ಲುವವರು ನಾವೆ. ಇದು ನಿಜವಾದ ಯುದ್ಧ., ಹಿಂದೆ ನಡೆದಿರಲಿಲ್ಲ ಅದಕ್ಕೆ ಭಾರತದ ಭವ್ಯ ವ್ಯಕ್ತಿತ್ವ ಕುಸಿಯುತ್ತಿದೆ.

ಬುಧಾನ್ ಸಬರನಿಗೆ ನಾನು ಋಣಿ. ಗಾಯತ್ರಿ ಬಹುಶಃ ಶ್ಯಾಮಲಿಗೆ ಎಲ್ಲವನ್ನು ವಿವರಿಸಬಹುದು. ಈ ವರ್ಷ ನಾವು ಶೋಕ ಆಚರಿಸುತ್ತಿದ್ದೇವೆ ಅದಕ್ಕೆ ಈ ಸಲದ ಚಳಿಗಾಲಕ್ಕೆ ಸಬರ ಮೇಳ ಇಲ್ಲ.

*ಕೃಪೆ : The denotified & nomadic tribes right action group - News letter April 1998*

# ಒಂದು ಯಶಸ್ವೀ ವಿಶ್ಲೇಷಣೆ

ಕನ್ನಡದ ಹಿರಿಯ ಲೇಖಕಿಯರಲ್ಲಿ ಒಬ್ಬರಾದ ಸಿ. ಎನ್. ಜಯಲಕ್ಷ್ಮೀ ದೇವಿಯವರ ಅಪ್ರಕಟಿತ ಬರಹಗಳನ್ನು ಯಾರಾದರೂ ಪ್ರಕಟಿಸಬೇಕೆಂಬ ಅವರ ಪತಿ ನಂಜುಂಡಯ್ಯನವರ ಆಶಯದ ಮೇರೆಗೆ ಮೈಸೂರಿನ ಸಮತಾ ಅಧ್ಯಯನ ಕೇಂದ್ರದಿಂದ ಪ್ರಕಟವಾಗಿರುವ ಈ ಪುಸ್ತಕ ಗಮನಾರ್ಹ.

ಜಯಲಕ್ಷ್ಮೀದೇವಿಯವರು 10ನೇ ವಯಸ್ಸಿಗೇ ಮದುವೆಯಾಗಿ ನಂತರ ಎಷ್ಟೋ ವರ್ಷಗಳ ನಂತರ ಓದು ಮುಂದುವರೆಸಿ ಹಿಂದಿ ಎಂ.ಎ. ಪಡೆದವರು. ಇವರು ಸದಾ ಕ್ರಿಯಾಶೀಲವಾಗಿದ್ದು ಮಹಿಳೆಯರನ್ನು ಸಂಘಟಿಸಿ ಅವರಲ್ಲಿ ಜಾಗೃತಿ ಮೂಡಿಸಿದವರು. ಕನ್ನಡ ಸಾಹಿತ್ಯ ಪರಿಷತ್ತು ನಡೆಸುತ್ತಿದ್ದ ಕಾವ್ಯ-ಜಾಣ-ಪಂಡಿತ ಪರೀಕ್ಷೆಗಳಲ್ಲೂ ಪಾಸಾದ ಇವರು ಎಸ್.ವಿ. ಪರಮೇಶ್ವರಭಟ್ಟರು, ಪ್ರೊ. ಶಂಕರನಾರಾಯಣರಾವ್, ಪ್ರೋ. ತ.ಸು. ಶಾಮರಾಯ - ಎಲ್ಲರ ಸ್ನೇಹ, ಅಭಿಮಾನಗಳಿಸಿದ್ದರು. ಕನ್ನಡ ಸಾಹಿತ್ಯದಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದಷ್ಟೇ ಅಲ್ಲ ಬರವಣಿಗೆಯಲ್ಲೂ ತಮ್ಮನ್ನು ತೊಡಗಿಸಿಕೊಂಡವರು. ಸ್ತ್ರೀಪರ ಕಾಳಜಿಯುಳ್ಳ ಅವರು ತಮ್ಮ ಅನುಭವಗಳನ್ನು ಹೆಣ್ಣಿನ ಸಮಸ್ಯೆಗಳ ಪರಿಚಯವನ್ನು ನೇರವಾಗಿ ಹಾಗೂ ಅವುಗಳಿಂದ ಬಿಡಿಸಕೊಳ್ಳಬೇಕಾಗಿರುವ ಅನಿವಾರ್ಯತೆಯನ್ನು ತಮ್ಮ ಕೃತಿಗಳಲ್ಲಿ ನಿರೂಪಿಸಿದವರು. - ಸಾಹಿತ್ಯಕವಾಗಿ ಶ್ರೇಷ್ಠವೆಂದು ಅಂದು ಕೊಳ್ಳದಿದ್ದರೂ ತಮಗನ್ನಿಸಿದ್ದನ್ನು ನೇರವಾಗಿ ಸ್ಪಷ್ಟಪಡಿಸ ಲೆತ್ನಿಸಿದವರು. ಸಾಹಿತ್ಯ, ಸಂಗೀತ, ನೃತ್ಯ, ನಟನೆ - ಹೀಗೆ ಎಲ್ಲವೂ ಗೊತ್ತಿದ್ದ ಇವರು ಸ್ವತಃ ನಾಟಕಗಳನ್ನು ಬರೆದು ಅಭಿನಯಿಸಿ, ಪ್ರದರ್ಶಿಸಿ ಅದರಿಂದ ಬಂದ ಹಣದಿಂದ 'ಭಾರತೀ ಮಹಿಳಾ ಸಮಾಜ'ವೊಂದನ್ನು ಆರಂಭಿಸಿದವರು. ಮಹಿಳಾ ಸಮಾಜವೆಂದರೇ ಮೂಗುಮುರಿಯುತ್ತಿದ್ದ ಗೃಹಿಣಿಯರನ್ನು ಜಯಲಕ್ಷ್ಮೀ ದೇವಿಯವರು ತಮ್ಮ ಪ್ರೀತಿ, ವಿಶ್ವಾಸ, ಸ್ನೇಹದಿಂದ ವಿವಿಧ ಸಾಂಸ್ಕೃತಿಕ - ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿದವರು. ತಮ್ಮ ಸಮಾಜಸೇವೆಗೆ ತಮ್ಮ ಸಾಹಿತ್ಯವನ್ನು ಬಳಸಿಕೊಂಡ ಇವರು 'ಅನಾಮಿಕ ಮತ್ತು ಇತರ ಕಥೆಗಳು' - ಎಂಬ ಕಥಾಸಂಕಲನ, 'ಕೋಳೂರು ಕೊಡಗೂಸು', 'ಸ್ನೇಹ ಸಾಮ್ರಾಜ್ಯ', 'ಚೋರನಲ್ಲ ದಂಗೆಕೋರ' - ಮಕ್ಕಳ ಸಾಹಿತ್ಯ, 'ಶಪ್ತಪಾಪಿ', 'ಗಂಗರಸ ದುರ್ವಿನೀತ' - ಕಾದಂಬರಿ 'ದಶರಥ', 'ದೇವಯಾನಿ' - ನಾಟಕಗಳು, 'ರಾಜಾರಮ್ ಮೋಹನರಾಯ್' - ಜೀವನ ಚರಿತ್ರೆಗಳನ್ನು ಪ್ರಕಟಿಸಿದ್ದಾರೆ. 'ನಾರಿಯ ಹಲವು ಮೋರೆಗಳು' ಅವರ ಅಪ್ರಕಟಿತ ಬರಹ. ಇವರಿಗೆ 1970ರ ಮಕ್ಕಳ ಸಾಹಿತ್ಯ ಸ್ಪರ್ಧೆಯಲ್ಲಿ 'ಕೋಳೂರು ಕೊಡಗೂಸು' ಪುಸ್ತಕಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು 1980ರಲ್ಲಿ 'ಗಂಗರಸ ದುರ್ವಿನೀತ' ಕೃತಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ದೊರೆತಿದೆ. ಇವೆಲ್ಲದರ ಜತೆಗೇ ಶಿಶುವಿಹಾರದಿಂದ ಹಿಡಿದು ವಯಸ್ಕ ಮಹಿಳೆಯರವರೆಗೂ ಅಕ್ಷರ ಕಲಿಸಿದ್ದಕ್ಕಾಗಿ 'ಸರ್ಕಾರದಿಂದಾಗದ ಸಾಧನೆಯನ್ನು ನೀವು ಸಾಧಿಸಿದ್ದೀರಿ' ಎಂಬ ಮೆಚ್ಚುಗೆಯನ್ನು ಆಗಿನ ಅರ್ಥಮಂತ್ರಿ ರಾಮಕೃಷ್ಣ ಹೆಗ್ಗಡೆ ಯವರಿಂದ ಪಡೆದ ಹೆಗ್ಗಳಿಕೆಯು ಇವರದಾಗಿತ್ತು.

[ಇವರು ಹುಟ್ಟಿದ್ದು : 1925, ಚನ್ನಪಟ್ಟಣದಲ್ಲಿ. ಬೆಳೆದದ್ದು ಮೈಸೂರಿನವರಾಗಿ, ನಗೆಮೊಗದ ಅವರು ಇನ್ನಿಲ್ಲವಾಗಿದ್ದು : 1995 ನ. 14ರಂದು]

ಜಯಲಕ್ಷ್ಮೀದೇವಿ : ವ್ಯಕ್ತಿ-ಅಭಿವ್ಯಕ್ತಿ ಈ ಪುಸ್ತಕದ ಆರಂಭದಲ್ಲಿ ಡಾ। ವಿಜಯಾದಬ್ಬೆಯವರು ಜಯಲಕ್ಷ್ಮೀ ದೇವಿಯವರ ಬರಹಗಳ ಹಿನ್ನೆಲೆಯಲ್ಲಿ 'ನಿಮ್ಮೊಡನೆ' ಕುರಿತು ಈ ಮತ್ತು ಇಂಥ ಪುಸ್ತಕಗಳ ಪ್ರಕಟಣೆಯ ಉದ್ದೇಶದ ಬಗ್ಗೆ ಆಡಿರುವ ಮಾತುಗಳು ಮುಖ್ಯವೆನಿಸುತ್ತವೆ: "ಜಯಲಕ್ಷ್ಮೀ ದೇವಿಯವರಂತೆ ಎಷ್ಟು ಸ್ತ್ರೀ ಚೈತನ್ಯಗಳು ಇಲ್ಲಿಯ ಬದುಕನ್ನು ಹಸನುಗೊಳಿಸಲು ತಮ್ಮ ತಮ್ಮ ನೆಲೆಯಿಂದ ತಮ್ಮ ಸಾಮರ್ಥ್ಯವನ್ನು ಧಾರೆಯೆರೆದು ಎಲೆಮರೆಯ ಕಾಯಿಗಳಂತೆ ದುಡಿಯುತ್ತಾ ಬಂದಿದ್ದಾರೆ ಎಂಬುದನ್ನು ನೆನೆಯುವಾಗ ವಿಸ್ಮಯ ವಾಗುತ್ತದೆ, ಮನಸ್ಸು ತುಂಬಿಬರುತ್ತದೆ. ಅಂಥವರು ಪ್ರಸಿದ್ಧಿಗಾಗಿ ಯಾವ ವೇಷವನ್ನು ತೊಟ್ಟವರಲ್ಲ, ಯಾವ ಬಣ್ಣವನ್ನೂ ಬಳಿದುಕೊಂಡವರಲ್ಲ. ಉಸಿರಾಟದಷ್ಟು ಸಹಜವಾಗಿ ಸಾಮಾಜಿಕ - ಸಾಂಸ್ಕೃತಿಕ ಕಾರ್ಯಗಳನ್ನು ಮಾಡಿಕೊಳ್ಳುತ್ತಾ ಹೋದರು. ಆದರೆ

ಅವರಿಗಾಗಿ ಅಲ್ಲದಿದ್ದರೂ ನಮಗಾಗಿ ಅವರಿಂದ ಉಪಕೃತರಾದ ನಾವು ಅವರನ್ನು ಸ್ಮರಿಸಬೇಕಿದೆ. ಅವರ ವಿಚಾರ ಕೃತಿಗಳನ್ನು ತಿಳಿಯುತ್ತಾ ಒರೆಗೆ ಹಚ್ಚುತ್ತಾ ಹೋಲಿಸುತ್ತಾ ನಮ್ಮ ಮುನ್ನಡೆಯನ್ನು ಸಾಧಿಸಬೇಕಾಗಿದೆ. ಅಂಥದೊಂದು ಸ್ಮರಣೆಯೇ ಈ ಪುಸ್ತಕ ಎನ್ನಬಹುದು.''

ಜಯಲಕ್ಷ್ಮಿದೇವಿಯವರ ಬದುಕು-ಬರಹಗಳನ್ನು ಓದುಗರಿಗೆ ಪರಿಚಯಿಸುವ ಈ ಚಿಕ್ಕ ಪುಸ್ತಕದ ಉದ್ದೇಶ - ಸಂಪೂರ್ಣವಾಗಿಯಲ್ಲದಿದ್ದರೂ ಯಶಸ್ವಿಯಾಗಿದೆಯೆಂಬುದರಲ್ಲಿ ಎರಡು ಮಾತಿಲ್ಲ. ಡಾ. ಎಚ್. ಎಂ. ಕಲಾಶ್ರೀ ಮತ್ತು ಡಾ. ಟಿ. ಎಸ್. ನಾಗರತ್ನ ಜಯಲಕ್ಷ್ಮಿ ದೇವಿಯವರ ಬದುಕು ಬರಹದ ಬಗ್ಗೆ ಸ್ಥೂಲವಾಗಿ ಪರಿಚಯಿಸಿದರೆ, ಅವರ ಕಥನ ಲೋಕದ ಬಗ್ಗೆ ಡಾ. ಚಂದ್ರಮತಿಸೋಂದಾ ಅವರು ವಿಶ್ಲೇಶಿಸಿದ್ದಾರೆ. 'ಶಪ್ತವಾಪಿ' ಮತ್ತು 'ಗಂಗರಸ ದುರ್ವಿನೀತ' ಕಾದಂಬರಿಗಳ ಬಗ್ಗೆ ಅದರೆಲ್ಲ ಸೂಕ್ಷ್ಮತೆಗಳನ್ನು ವಿಸ್ತಾರವಾಗಿ ವಿಶ್ಲೇಷಿಸುವ ಇವರು ಕಥಾ ಸಂಕಲನಗಳನ್ನು ಕುರಿತು ಹೇಳುವಾಗ ಈಗಾಗಲೇ ಲೇಖನ ಉದ್ದವಾಯ್ತೇನೋ ಎಂದುಕೊಂಡು ಆತುರಾತುರವಾಗಿ ಹೇಳಿ ಮುಗಿಸಿಬಿಟ್ಟಂತಿದೆ. ಇವುಗಳ ಬಗೆಗೂ ಕೊಂಚ ವಿಸ್ತಾರವಾಗೇ ಹೇಳಬಹುದಿತ್ತೇನೋ.

ಜಯಲಕ್ಷ್ಮಿಯವರ ಮಹಿಳೆ ದೃಷ್ಟಿಯನ್ನು ಕುರಿತು ಡಾ.ಸುನಂದಮ್ಮನವರು ಆಡಿರುವ ಈ ಮಾತಗಳು ಗಮನಾರ್ಹ: "ಇವರ ಬಹುಪಾಲು ರಚನೆಗಳು ವಿಚಾರ ಮಂಡನೆಗೇ ಹುಟ್ಟಿಕೊಂಡಿವೆ. ಹೀಗಾಗಿ ಕತೆಗಳು ಕಲಾತ್ಮಕವಾಗಿ ಮೂಡಿಬಂದಿಲ್ಲ. ಇಲ್ಲಿ ಕಲೆಗಾರಿಕೆಗಿಂತ ಅವರಿಗಿದ್ದ ವಿಚಾರಗಳ ಕಡೆಗೆ ಹೆಚ್ಚಿನ ಗಮನಹರಿಸಬೇಕಾಗಿದೆ.'' - ಇದು ಜಯಲಕ್ಷ್ಮಿಯವರ ಒಟ್ಟು ಬರವಣಿಗೆಯ ಸ್ವರೂಪವನ್ನು ತಿಳಿಸುತ್ತದೆ.

ಮಹಿಳಾ ಸ್ವಾತಂತ್ರ್ಯ ಪರಿಕಲ್ಪನೆಯ ವಿಶ್ಲೇಷಣೆ ಜಯಲಕ್ಷ್ಮೀದೇವಿಯವರ 'ನಾರಿಯ ಹಲವು ಮೋರೆಗಳು' ಎಂಬ ಅಪ್ರಕಟಿತ ಕೃತಿಯ ಪ್ರಸ್ತಾವನೆಯನ್ನು ಮತ್ತು ಅದರ ಕೆಲವು ಆಯ್ದ ಭಾಗಗಳನ್ನು ಇದೇ ಪುಸ್ತಕದಲ್ಲಿ ಪ್ರಕಟಿಸಿರುವುದು ಉಚಿತವಾಗಿದೆ. ಸುಮಾರು ೧೮೦ ಪುಟಗಳ ಗಾತ್ರದ ಪುಸ್ತಕವಾಗ ಬಹುದಾಗಿದ್ದ ಜಯಲಕ್ಷ್ಮಿಯವರ ಅಪ್ರಕಟಿತ ಬರಹಗಳನ್ನು ಪ್ರಕಟಿಸಲಾಗದೆ - ಅರ್ಥಿಕ ಮುಗ್ಗಟ್ಟಿನಿಂದಾಗಿ - ಅವರ ಬದುಕು ಮತ್ತು ಬರಹಗಳನ್ನು ಕುರಿತು ವಿಮರ್ಶಾ ಸಂಕಲನವೊಂದನ್ನು ಹೊರತಂದಿರುವ ಮೈಸೂರಿನ ಸಮತಾ ಅಧ್ಯಯನ ಕೇಂದ್ರ ಮತ್ತು ಇದಕ್ಕೆ ಕಾರಣರಾದವರೆಲ್ಲರೂ ಪ್ರಶಂಸಾರ್ಹರೇ. - ಅದೂ ಸ್ತ್ರೀಯರ ಬದುಕಿನ ಸಾಧನೆ, ಬರವಣಿಗೆ ಗಮನಕ್ಕೆ ಬಾರದೆ ಹೋಗಿಬಿಡುವ ಈ ಹೊತ್ತಿನಲ್ಲಿ.

*- ಗೀತಾ ಡಿ.ಸಿ*

## ಓದುಗರ ವಿಭಾಗ

ಸದ್ಯದ ಪರಿಸ್ಥಿತಿಯಲ್ಲಿ ಪತ್ರಿಕೆ ನಡೆಸುವುದು ಎಷ್ಟು ಕಷ್ಟಕರವಾದುದು ಎಂಬ ಅರಿವು ನಮಗಿದೆ. ಇಂತಹ ಪರಿಸ್ಥಿತಿಯಲ್ಲೂ ಪತ್ರಿಕೆ ನಿಯತವಾಗಿ ಹೊರ ತರುತ್ತಿರುವ ತಮ್ಮ ಕಾರ್ಯ ಶ್ಲಾಘನೀಯ. ಮಾನಸದ ಸಂಚಿಕೆಗಳಲ್ಲಿ ಮಹಿಳೆಯರ ಮೇಲೆ ಬೆಳಕು ಚೆಲ್ಲುವ ಕಿರು ಬರಹಗಳನ್ನು ಪ್ರಕಟಿಸುವ ನಿಟ್ಟಿನಲ್ಲಿ ಯೋಚಿಸಬಹುದಲ್ಲ. ಸದ್ಯದಲ್ಲಿ ಪ್ರಕಟಿಸುವ ದೀರ್ಘ ಬರಹಗಳನ್ನು ಕಡಿಮೆ ಮಾಡಿ, ಮಹಿಳೆಯರಿಗೆ ಸುಲಭದಲ್ಲಿ ಅರ್ಥವಾಗುವಂಥಹ ಸಾಹಿತ್ಯ, ಆರೋಗ್ಯ ಮುಂತಾದ ಅಂಕಣಗಳು ಬಂದರೆ ಚೆನ್ನಾಗಿರುತ್ತದೆ.

*ಸ್ನೇಹಕಿರಣ ಜಗದೀಶ್*

ಸಿನಿಮಾ

# 'ಹೂಮಳೆ' ಸುರಿಸಿದ ಪ್ಲಾಸ್ಟಿಕ್ ದಳಗಳು

ಮೊನ್ನೆ ಇಲ್ಲಿ ಭಾರಿ ಮಳೆಯಾಯಿತು. ಆಲಿಕಲ್ಲಿನ ಮಳೆ. ಸಿಕ್ಕಿಕೊಂಡ ಪಾಪಿಗಳಿಗೆಲ್ಲ ಸರಿಯಾದ ಕಲ್ಲೇಟು. ಮರುದಿನ 'ಹೂಮಳೆ' ಸಿನಿಮಾಕ್ಕೆ ಹೋಗುವ ಕಾತುರ. ರಮೇಶ್ ಸಿನಿಮಾ ಅಂತ ಸ್ವಲ್ಪ ಜಾಸ್ತಿ ಹುಮ್ಮಸ್ಸು ಇತ್ತು. ಅದೇನೋ 'ವಿಧವಾ ವಿವಾಹ'ದ ಕತೆ ಎಂಬ ಪ್ರಚಾರ ಜೋರಾಗಿ ಇದ್ದುದರಿಂದ ಈ ಬೆಣ್ಣೆ ಬಿಸ್ಕತ್‌ಗೆ ಇಲ್ಲೇನು ಆಗುತ್ತೆ ಎಂದುಕೊಂಡೇ ಹೊರಟೆ. ಸದ್ಯ ಮಳೆ ಇರಲಿಲ್ಲ. ನಾಜೂಕಾಗಿ ಥಿಯೇಟರ್ ಸೇರಿದೆ.

ಅನುಕೂಲವಾದ ಆನಂದವಾದ ಕುಟುಂಬದ ಸಕ್ರಿಯ ಸದಸ್ಯನಾದ ನಮ್ಮ ಹೀರೋ ಅಸ್ಸಾಂನಲ್ಲಿ ಗಲಭೆಯೊಂದರಲ್ಲಿ ತನ್ನ ಪತಿಯನ್ನು ಕಳೆದುಕೊಂಡು ವಿಧವೆಯೊಬ್ಬಳನ್ನು ಪ್ರೀತಿಸಿ ಮದುವೆಯಾಗುವುದು ಒಟ್ಟು ಕತೆ.

ಟಿಕೆಟ್ ದುಡ್ಡಿಗೆ ಮೋಸವಾಗದ ಹಾಗೆ ಬಣ್ಣ ಬಣ್ಣದ ಸೀನ್‌ಗಳಿಂದ ತುಂಬಿದ ಸಿನಿಮಾ, ಕಂಗೊಳಿಸುವ ದೊಡ್ಡ ಮನೆ, ಹಸಿರು ಹುಲ್ಲು, ತೋಟದಲ್ಲಿ ತೂಗುಯ್ಯಾಲೆ, ತರಲೆ ಮಾಡುವ ತರುಣ ತರುಣಿಯರು, ಅನ್ನಪೂರ್ಣೆ ಅಮ್ಮ, ಆಶೀರ್ವಾದಕ್ಕೆ ಅಜ್ಜ ಅಜ್ಜಿ, ಅಭಿಮಾನಕ್ಕೆ ಅಪ್ಪ, ಅಕ್ಕರೆಯ ನಾಯಿ ಬೆಕ್ಕು ವಾಹ್ ಎಷ್ಟು ಚಂದದ ಸಂಸಾರ! ಯಾರೂ ಬಯಸುವ, ಕರುಬುವ ಸುಖಿ ಸಂಸಾರ. ಮನೆಕೆಲಸದವಳನ್ನು ಬಿಟ್ಟು ಎಲ್ಲರೂ ತೆಳ್ಳಗೆ ಬೆಳ್ಳಗೆ ಸುಂದರವಾಗಿರುವವರೇ. ನಮ್ಮ ಹೀರೋ ಜಾಹೀರಾತು ಜಾಬಿನಲ್ಲಿರುವವನು.

ಮಧ್ಯಂತರದವರೆಗೆ ಇದೇ ಫಾರ್ಮುಲ ಸುಖಗಳಿಂದ ಬೋರು ಹೊಡೆಸಿತು ಸಿನಿಮಾ.

ಸಿನಿಮಾ ಹೀರೋಯಿನ್ ಕಟ್ಟಾ ಕನ್ನಡಾಭಿಮಾನಿ ಮಗಳು ಕನ್ನಡ ಪ್ರಿಯೆ. ಹೀರೋಯಿನ್‌ನ ಪತಿ ಅಸ್ಸಾಮಿನ ರಾಜಕೀಯ ಗಲಭೆಯೊಂದರಲ್ಲಿ ಕೊಲೆಯಾಗಿದ್ದಾನೆ. ಈತ ಮಿಲಿಟರಿ ಯವನೋ, ಮಿಲಿಟೆಂಟೋ ಅಲ್ಲದೆ ಸೇಫ್ ಆದ ಅದೃಶ್ಯ ಡಾಕ್ಟರ್ ಕ್ಯಾರೆಕ್ಟರ್. ಹೀರೋ ಹೀರೋಯಿನ್‌ಅನ್ನು ಟಿವಿ ಸಂದರ್ಶನದಲ್ಲಿ ನೋಡಿ ದಾಂಪತ್ಯದ ಬಗ್ಗೆ ಅವಳಾಡಿದ ಮಾತುಗಳಿಂದ ಇಂಪ್ರೆಸ್ ಆಗಿ ಆಕೆಯನ್ನೇ ಮದುವೆಯಾಗುವುದಾಗಿ ಪಣ ತೊಟ್ಟು ಗುವಾಹಟಿಗೆ ಹೋಗುತ್ತಾನೆ. ಹೀರೋಯಿನ್ ವಿಧವೆಯಾಗಿರುವುದು ಸಿನಿಮಾ ಕತೆಗೆ ಮುಖ್ಯವಾದಲ್ಲಿ ಅದು ಯಾವ ಊರಿನಲ್ಲಾದರೂ ಆಗಬಹುದಿತ್ತು. ನಮ್ಮ ದೇಶದಲ್ಲಿ ಗಲಭೆ ಇಲ್ಲದ ರಾಜ್ಯವಾವುದು? ಅಸ್ಸಾಮೇ ಏಕೆ ಬೇಕಿತ್ತು? ಹೋಗಲಿ ಅಸ್ಸಾಮಿನಲ್ಲಿ ನಮಗೆ ತೋರಿಸಿದ್ದಾದರೂ ಏನು? ಒಂದು ಮನೆಯ ಒಳಾಂಗಣ ಹೊರಾಂಗಣ, ಒಂದು ಗಾರ್ಡನ್, ಒಂದು ರಸ್ತೆ ಅಷ್ಟೇ. ಇಷ್ಟೇ ಆದರೂ ಕೆಲವೇ ನಿಮಿಷಗಳು ಬಂದು ಹೋಗುವ 'ಬಹಾರುಲ್' ಅದ್ಭುತವಾಗಿ ನಟಿಸಿದ್ದಾರೆ. ಇಡೀ ಸಿನಿಮಾದಲ್ಲಿ ಗಂಭೀರ ಎನಿಸುವುದು ಇದೊಂದು ಸೀನ್ ಮಾತ್ರ.

ಇತ್ತೀಚೆಗೆ ಬೆಳೆಯುತ್ತಿರುವ issue-based, ಸೀರಿಯಸ್ ಸಿನಿಮಾಗಳಲ್ಲೂ ರೋಮಾನ್ಸ್ ಅಷ್ಟೇ ಪ್ರಧಾನವಾಗಿದೆ. ಈ ಸೇಫ್ ಸಿನಿಮಾಗಳ ಹಣೆಬರಹವೇ ಇಷ್ಟು. ಬಾಂಬೆ, ಮಾಚಿಸ್, ಇಂದಿರ ಹೀಗೆ ಹಲವಾರು. ಬಣ್ಣ ಬಣ್ಣದ ರೋಮಾನ್ಸ್‌ಗಳಿಗೆ ಗಂಭೀರವಾದ ಸಾಮಾಜಿಕ ಸಮಸ್ಯೆಗಳನ್ನು ಹಿಮ್ಮೇಳಗಳನ್ನಾಗಿ ಬಳಸಿಕೊಳ್ಳಲಾಗುತ್ತದೆ (ಇಂದಿರ ಸ್ವಲ್ಪ ವಾಸಿ). ಡಿಫರೆಂಟೆ ಸಿನಿಮಾ ಪಿತ್ಥದ ಪ್ರಥಮ ರೋಗ ಲಕ್ಷಣ - ಒಳ್ಳೆಯ ಶಾಪ್‌ಗಳು, ಫೆಮಿನಾ ಹಿರೋಯಿನ್, ಪೋಲಿಯಲ್ಲದ ತುಂಟ ಹೀರೋ, ಇವರಿಗೆ ಪೂರಕವಾಗಿ ಗಲಭೆಗಳು ಸಾವು ನೋವುಗಳು, ಅತ್ಯಾಚಾರ ಇವು Backgroundಗಳು.

ವಿಧವಾ ವಿವಾಹದ ಪರವಾಗಿ 'ನಮ್ಮ'ಹಿಂದೂ ಸಂಸ್ಕೃತಿ ಎಷ್ಟು ಉತ್ತಮವಾಗಿದೆ ಎಂದು ವಿವರಿಸಲು ಸಂಸ್ಕೃತದಲ್ಲಿ ಅಳಂಬಳಂ ಎಂದು ಎರಡು ವಾಕ್ಯ ಹೇಳಿಬಿಟ್ಟರೆ ಸಾಕೆ? ಸತಿ ಸಂಪ್ರದಾಯವನ್ನು, ವಿಧವೆಯರು 'ಅಮಂಗಳಕರರು' ಎಂಬುದನ್ನೂ ವಿವರಿಸುವ ಕಟ್ಟಳೆಗಳನ್ನು ಹೇರುವ ಇನ್ನೂರು ವಾಕ್ಯಗಳನ್ನು ಯಾವ ಸಂಸ್ಕೃತ ಪಂಡಿತನೂ ಹೇಳಬಹುದು. ಹಿಂದೂ ಸಮಾಜ ವಿಧವೆಯರನ್ನು ಗೋಳಾಡಿಸಿರುವಷ್ಟು ವಿಶ್ವದ ಯಾವುದೇ ಸಮಾಜವೂ ಮಾಡಿಲ್ಲ. ಅಂತೂ ಬಿಜೆಪಿ ಸರ್ಕಾರ ಬಿದ್ದು ಹೋಗುವುದರೊಳಗಾಗಿ ಒಂದೆರಡು ಅವಾರ್ಡ್‌ಗಳನ್ನು ಜೇಬಿಗೆ ಹಾಕ್ಕೊಂಡರೆ ಸರಿ!

ಅಸ್ಸಾಂ ಗಲಭೆಗಳಿಂದ ಉಂಟಾದ ಹಾನಿಯ ಬಗ್ಗೆ ನೊಂದು ಮಾತಾಡುವ ಹೀರೋನನ್ನು ಅವನ ಸುಂದರ ಸಂಸಾರದ ಸದಸ್ಯರೊಬ್ಬರು 'ಅದೆಲ್ಲ ನಿಂಗ್ಯಾಕೋ ನಿನ್ನ ಕೆಲ್ಸ ನೋಡ್ಕೊಂಡು ಜಾಗ್ರತೆ ಬಂದ್ಬಿಡು' ಎಂದು 'ಸಾಂತ್ವನ' ನೀಡಿದಾಗಲು ಅದಕ್ಕೆ ಉತ್ತರವಾಗಿ ಹೀರೋ ತುಂಬ disturb ಆದವನಂತೆ ಕನ್ನಡಿಗರಿಗೆ (ನಮಗೆ)ಅಸ್ಸಾಮಿನ ರಾಜಕೀಯ ಪರಿಸ್ಥಿತಿಯನ್ನು ವಿವರಿಸುವ ರೀತಿ - ಅದನ್ನು ಕನ್ನಡದ ಟೇಬಲ್ಲಿನ ಅಸ್ಸಾಂ ಟೀ ಯೊಂದಿಗೆ ಜೋಡಿಸಿ ಮಾತಾಡುವುದು 'ಚಹಾ ರಾಜಕೀಯ'ದಷ್ಟು ಬಾಲಿಶ ವಾಗಿದೆ. ಅಸ್ಸಾಂ ಏಕೆ ಧಗಿಸುತ್ತಿದೆ, ಅದರ ಹಿಂದಿನ ಮುಖಗಳಾವುವು? ಸರ್ಕಾರ ಏನು ಮಾಡುತ್ತಿದೆ. ಇದರ ದುರುಪಯೋಗ ಪಡಿಸಿಕೊಳ್ಳುವವರು ಯಾರು? ಹೇಗೆ? ಸಾಮಾನ್ಯ ಜನರ ಜನಜೀವನ ಹೀಗಿದೆ? ಅದರ ಪ್ರಶ್ನೆಗಳಾವುವು ಹೊರದೇಶಗಳ ಕೈವಾಡ ಎಂತಹವು? ಶಾಂತಿ ಪ್ರಯತ್ನಗಳೇನು ಎಂಬ ಎಷ್ಟೋ ಪ್ರಶ್ನೆಗಳಿಗೆ ವಿವರಣೆಯೂ ಇಲ್ಲ. ಆದ್ಯತೆ ಮೊದಲೇ ಇಲ್ಲ. ಭಯೋತ್ಪದಕನೊಬ್ಬ ನೀಡುವ ಸಂದರ್ಶನ ಬಿಟ್ಟರೆ ನಮಗೆ ಅಸ್ಸಾಂನ ಪರಿಚಯವೇ ಆಗುವುದಿಲ್ಲ. ಅದೆಲ್ಲ ಯಾಕೆ ಹೀರೋ-ಹೀರೋಯಿನ್ ಮದುವೆಯಾಗ್ತಾರಾ? ಹೇಗೆ? ಅಷ್ಟೇ ಬೇಕು ಅಲ್ಲವೇ. ಹೆಣಗಳ ರಾಶಿಯಲ್ಲೂ ಇವರಿಗೆ ಬೇಕಾದವರು ಮಾತ್ರ ಉಸಿರಾಡುತ್ತಿರುತ್ತಾರೆ.

ಅವಿಭಕ್ತ ಕುಟುಂಬವನ್ನು ವೈಭವೀಕರಿಸುವ ಆಸೆಯಲ್ಲಿ ವ್ಯಕ್ತಿತ್ವಗಳನ್ನೂ, ಸಂಬಂಧಗಳನ್ನು ತೀರ ಸರಳಗೊಳಿಸಿಬಿಟ್ಟಿವೆ ಹೂಮಳೆ. ಎಲ್ಲರೂ ಎಲ್ಲರಿಗೂ ಒಳ್ಳೆಯವರೇ No problem absolutely !

ಇಂತಹ ರೆಡಿಮೇಡ್ ಮನುಷ್ಯರು, ಅವರ 'ಹೊರಗೆ' ಆಗುವ ಅಹಿತ ಘಟನೆಗಳು, ಈ ಸಮಸ್ಯೆಗಳಿಗೆ ಧಾರ್ಮಿಕ ಭಾವುಕ ಪರಿಹಾರಗಳು.... ಇಂತಹ Superficial ಸಿನಿಮಾಗಳಿಗೆ ಯಾರು ಹೊಣೆ ?

ಹೂ ಮಳೆ ಸುರಿಸಿದ ಪ್ಲಾಸ್ಟಿಕ್ ದಳಗಳ ಸಡಗರ ಮುಗಿಯುತ್ತಿದ್ದಂತೆಯೇ ಹಿಂದಿನ ದಿನ ಸುರಿದು ಆಲಿಕಲ್ಲಿನ ಮಳೆಯ ಹಂಬಲ ಒತ್ತರಿಸಿ ಬಂದಿತ್ತು.

- ಚಿತ್ರಾ ಎಸ್.

---

# ಹರೀಶ್ ಕಾರ್ತೀಕನನ್ನು ಮಹಿಳೆಯರು ಹೊಡೆದು ಸಾಯಿಸಿದ್ದೇಕೆ?

ಮಹಿಳೆಯರಿಗೆ ಲೈಂಗಿಕ ಕಿರುಕುಳ ನೀಡಿ ಇಡೀ ಊರನ್ನು ಭಯದ ಛಾಯೆಯಲ್ಲಿ ಮುಳುಗಿಸಿದ್ದ ದಕ್ಷಿಣ ಕನ್ನಡದ ಸೂರತ್ಕಲ್‌ನ ಮುಂಚೂರಿನ ಹರೀಶ್ ಕಾರ್ತೀಕನನ್ನು ಅವನ ನೆರೆಯ ಮಹಿಳೆಯರೆಲ್ಲಾ ಸೇರಿ ಕಲ್ಲಿನಿಂದ ಹೊಡೆದು, ಮರದ ತುಂಡುಗಳಿಂದ ಥಳಿಸಿ ಕೊಂದಿದ್ದಾರೆ. ಈ ಪ್ರಕರಣ ಇಡೀ ಕರಾವಳಿಯ ಜನರ ಮನಸ್ಸನ್ನು ಕಲಕಿದೆ ಮಾತ್ರವಲ್ಲದೆ; ಇಂತಹ ದುಷ್ಕೃತ್ಯ ಮಾಡುವಂತಹವರು ಯೋಚನೆ ಮಾಡುವಂತೆ ಮಾಡಿದೆ.

ಬೀಡಿ ಕಟ್ಟಿ ಜೀವನ ಸಾಗಿಸುವಂತಹ ಕೆಳ ಮಧ್ಯಮ ವರ್ಗದ ಕುಟುಂಬದಲ್ಲಿ ಹುಟ್ಟಿ ಬೆಳೆದ ಈ ಪೋರ, ಮೇಲ್ವರ್ಗದ ಜನರನ್ನು ಅನುಕರಣೆ ಮಾಡುವ ಆಸೆಯಿಂದ ಹಣಕ್ಕಾಗಿ ಮೊದಮೊದಲು ಮನೆಯವರನ್ನು ಕಾಡಿ ಆಮೇಲೆ ಊರಲ್ಲಿಯ ಚಿಕ್ಕ ಪುಟ್ಟ ಹಣವಂತರನ್ನು ಬೆದರಿಸಿ ಸುಲಿಗೆ ಮಾಡಿ ಅಭ್ಯಾಸ ಮಾಡಿಕೊಂಡು ತನ್ನ ಲೈಂಗಿಕ ತೃಪ್ತಿಗಾಗಿ ಅಕ್ಕ-ಪಕ್ಕದ ಹೆಣ್ಣು ಮಕ್ಕಳನ್ನು ಪೀಡಿಸಿದವನು. ಅಷ್ಟೇ ಸಾಲದೆಂಬುದಕ್ಕೆ ತನ್ನ ಚಿಕ್ಕಮ್ಮನ ಮಗಳು ವಿವಾಹಿತೆಯನ್ನು ತನ್ನ ಮನೆಗೆ ಬಲಾತ್ಕಾರವಾಗಿ ಕರೆದುಕೊಂಡು ಬಂದು ಅತ್ಯಾಚಾರವೆಸಗಿದ್ದಾನೆ. ಇದು ನಡೆದ ಮಾರನೆಯ ದಿನವೇ ಇವನು ಮಹಿಳೆಯರ ರೋಷಕ್ಕೆ ಬಲಿಯಾಗಿದ್ದಾನೆ. ಬಹುಶಃ ಇಡೀ ಊರಿನ ಮಹಿಳೆಯರೆಲ್ಲಾ ಜಾಗೃತರಾಗಿ ಇಂತಹ ನಿರ್ಧಾರ ತೆಗೆದುಕೊಳ್ಳಲು ಚಿಕ್ಕಮ್ಮನ ಮಗಳು ಅಂದರೆ ತನ್ನದೇ ತಂಗಿಯ ಮೇಲಿನ ಅತ್ಯಾಚಾರ ಕಾರಣೀಭೂತವಾಯಿತೇನೋ ಅನಿಸುತ್ತದೆ.

ಮಹಿಳೆಯರ ಈ ನಿರ್ಧಾರವನ್ನು ಸಾಮಾನ್ಯ ಜನರ ನಡುವೆ ಸಮರ್ಥಿಸುವವರೇ ಹೆಚ್ಚು. ಹೆಚ್ಚುತ್ತಿರುವ ರೌಡಿಸಂ, ಆರೋಪಿಗಳು ಒಮ್ಮೆ ಜೈಲಿಗೆ ಹೋದರೂ ಹೊರಗೆ ಬಂದ ಮೇಲೆ ಮತ್ತದೇ ಕೆಲಸ ಮುಂದುವರಿಯುವುದು, ದೀರ್ಘವಾದ ಕಾನೂನು ಪ್ರಕ್ರಿಯೆ ಮೊದಲಾದವುಗಳಿಂದ ರೋಸಿಹೋದ ಜನರಿಂದ ಸ್ಪಷ್ಟವಾದ ಒಂದು ತೀರ್ಪು ಸಿಕ್ಕಿದೆ.

ಈ ಪ್ರಕರಣದ ಬಗ್ಗೆ ಸುಮಾರು 19 ಜನ ಮಹಿಳೆಯರ ಮೇಲೆ ಪೋಲೀಸರು ಕೇಸು ದಾಖಲು ಮಾಡಿಕೊಂಡಿದ್ದಾರೆ. ಆದರೆ ಇನ್ನೂ ಮುಂದಕ್ಕೆ ಏನು ಮಾಡಬೇಕು, ಈ ಕೇಸನ್ನು ಹೇಗೆ ನಿಭಾಯಿಸಬೇಕು ಎಂಬುದು ಪೋಲೀಸರಿಗೂ ದೊಡ್ಡ ಪ್ರಶ್ನೆಯಾಗಿದೆ. ಕಾನೂನಿನ ರಕ್ಷಣೆ ಮಾಡಬೇಕಾದ ಪೋಲೀಸರು ಕೈ ಕಟ್ಟಿ ಕುಳಿತಿದ್ದುದರಿಂದಲೇ ಹರೀಶ ಇಷ್ಟು ಬೆಳೆದಿದ್ದ ಎಂಬುದು ಊರವರ ಹೇಳಿಕೆ.

ಅವನ ಮೇಲೆ ಯಾವುದೇ ದೂರನ್ನು ಪೋಲೀಸ್ ಠಾಣೆಗೆ ನೀಡಿದಾಗ ಪೋಲೀಸರು ಅವನನ್ನು ಬೆಳಿಗ್ಗೆ ಕರೆದುಕೊಂಡು ಹೋದರೆ ಸಾಯಂಕಾಲದೊಳಗೆ ಅವನು ಚೆನ್ನಾಗಿ ಕುಡಿದು ಹಿಂದೆ ಬಂದು ತಲವಾರು ಹಿಡಿದುಕೊಂಡು ದೂರು ನೀಡಿದವರನ್ನು ಬೆದರಿಸುತ್ತಿದ್ದ. ಇಂತಹ ಬೆದರಿಕೆಯಿಂದ ರೋಸಿಹೋದ ಜನ ಹೆಚ್ಚು ಕಮ್ಮಿ 300 ಮಹಿಳೆಯರು ಸೇರಿ ಇವನು ಮನೆಯಲ್ಲೇ ಮಲಗಿರುವ ಸಂದರ್ಭ ನೋಡಿಕೊಂಡು ಪೂರ್ತಿ ತಯಾರಿ ಮಾಡಿಕೊಂಡು ಅವನ ಮನೆ ಬಾಗಿಲಿಗೆ ಹೋಗಿ ಅವನನ್ನು ಹೊರಗೆ ಕರೆದಾಗ ಅವನು ಬಾರದ್ದನ್ನು ನೋಡಿ ಮನೆ ಮಾಡನ್ನು ಹತ್ತಿ ಕಲ್ಲು ಹೊಡೆದು ಹೊರಗೆ ಎಳೆದು ತಂದು ಮುಗಿಸುವಲ್ಲಿ ಸಫಲರಾಗಿದ್ದಾರೆ.

ಆ ಊರಿನಲ್ಲಿ ಯಾರನ್ನೇ ಪ್ರಶ್ನಿಸಲಿ - ಈ ಪ್ರಕರಣದ ಬಗ್ಗೆ ನಿಮ್ಮ ಅಭಿಪ್ರಾಯವೇನೆಂದು ಕೇಳಿದರೆ ''ಇದೊಂದು ತುಂಬಾ ಒಳ್ಳೆಯ ಕೆಲಸ ಅನ್ನುತ್ತಾರೆ. ಇಲ್ಲದಿದ್ದರೆ ಅವನನ್ನು ನಿಭಾಯಿಸಲು ಅವನ ಮನೆಯವರಿಂದ ಮಾತ್ರವಲ್ಲ, ಯಾರಿಂದಲೂ ಆಗುತ್ತಿರಲಿಲ್ಲ".

ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ಲೈಂಗಿಕ ಕಿರುಕುಳ ದೌರ್ಜನ್ಯಗಳಿಗೆ ಪರಿಹಾರ ಸಿಗದಂತಹ ಸಂದರ್ಭದಲ್ಲಿ ಮಹಿಳೆಯರೊಳಗಿದ್ದ ಶೋಷಣೆಯ ವಿರುದ್ಧದ 'ಕಿಡಿ' ಈ ರೀತಿಯಲ್ಲಿ ಹೊರಹೊಮ್ಮಿದ್ದರಲ್ಲಿ ವಿಶೇಷವೇನಿಲ್ಲ.

ಎರಡು ವರ್ಷಗಳ ಹಿಂದೆ ರಾಜಸ್ಥಾನದಲ್ಲಿ ಸಮಾಜ ಸೇವಕಿ ಬನ್ವಾರಿದೇವಿಯ ಮೇಲೆ ಸಾಮೂಹಿಕ ಅತ್ಯಾಚಾರ ನಡೆದ ಸಂದರ್ಭ ಆರೋಪಿಗಳನ್ನು ಪತ್ತೆ ಹಚ್ಚಲಾಯಿತಾದರೂ, ಆರೋಪಿಗಳು ಉನ್ನತ ಕುಟುಂಬದವರೆಂಬ ಹಿನ್ನೆಲೆಯಲ್ಲಿ ಅವರನ್ನು ಆರೋಪದಿಂದ ಮುಕ್ತಗೊಳಿಸಲಾಯಿತು. ಇದೇ ರೀತಿ ಇತ್ತೀಚೆಗೆ ಇದೇ ಪ್ರದೇಶದಲ್ಲಿ ನಡೆದ ಸಾಮೂಹಿಕ ಅತ್ಯಾಚಾರದಲ್ಲಿ ಅತ್ಯಂತ ಪ್ರಭಾವಿ ವ್ಯಕ್ತಿಯಾದ ಪೋಲೀಸ್ ಅಧಿಕಾರಿ ಭಾಗಿಯಾಗಿದ್ದರೂ ಅವರಿಗೆ ಶಿಕ್ಷೆ ನೀಡುವಲ್ಲಿ ಕಾನೂನು ವಿಫಲವಾಯಿತು.

ಹೆಣ್ಣು ಮಕ್ಕಳನ್ನು ಮಾನಸಿಕವಾಗಿ, ದೈಹಿಕವಾಗಿ ಶೋಷಿಸುವವರಿಗೆ ತಕ್ಕ ಶಿಕ್ಷೆಯನ್ನು ನೀಡುವಲ್ಲಿ ನಮ್ಮ ನ್ಯಾಯಾಂಗ ವ್ಯವಸ್ಥೆ ವಿಫಲವಾಗಿರುವ ಹಿನ್ನೆಲೆಯಲ್ಲಿ ಅಪರಾಧಿಗಳಿಗೆ ಸಜೆ ನೀಡುವುದರಿಂದ, ದಂಡ ತೆರುವಂತೆ ಮಾಡುವುದರಿಂದ ಅಥವಾ ಕಠಿಣ ಶಿಕ್ಷೆ ನೀಡುವುದರಿಂದ ಅಪರಾಧಿಗಳಲ್ಲಿರುವ ವಿಕೃತ ಮನೋಭಾವನೆಯನ್ನು ಖಂಡಿತವಾಗಿಯೂ ತೊಲಗಿಸಲಾಗದು.

ಇಂತಹ ಪರಿಸ್ಥಿತಿಯಲ್ಲಿ ಮನೋಇಚ್ಛೆ ಅಮಾಯಕ ಮಹಿಳೆಯರನ್ನು ಬಲಾತ್ಕರಿಸುತ್ತಾ, ಗೂಂಡಾಗಿರಿ ಮಾಡುತ್ತಾ, ಹಲವು ಪ್ರಕರಣಗಳಲ್ಲಿ ಭಾಗಿಯಾಗಿದ್ದ ಯುವಕನೊಬ್ಬನನ್ನು ಹದ್ದುಬಸ್ತಿನಲ್ಲಿಡಲಾಗದ, ಕಾನೂನು ವ್ಯವಸ್ಥೆಗೆ ರೋಸಿಹೋದ ಮಹಿಳೆಯರು ತಾವೇ ಅಪರಾಧಿಗಳಿಗೆ ಶಿಕ್ಷೆ ನೀಡಿದ್ದಲ್ಲದೆ ''ಯಾರಾದರೂ ಹುಡುಗಿಯರಿಗೆ ಕಿರುಕುಳ ನೀಡಿದರೆ ಇದೇ ರೀತಿ ಕಾದಿದೆ'' ಎಂದು ಗಂಟಾಘೋಷವಾಗಿ ಹೇಳಿದ್ದಾರೆ.

ಪ್ರಸ್ತುತ ಪರಿಸ್ಥಿತಿಯಲ್ಲಿ ಹೆಣ್ಣುಮಕ್ಕಳ ಮೇಲಿನ ದೌರ್ಜನ್ಯಗಳು ದಿನದಿಂದ ದಿನಕ್ಕೆ ಏರುತ್ತಿದೆಯೇ ಹೊರತು ಇಳಿಮುಖವಾಗುತ್ತಿಲ್ಲ. ಕಳೆದ ವರ್ಷ ರಾಷ್ಟ್ರದಲ್ಲಿ ಹದಿನಾಲ್ಕು ಸಾವಿರ ಮಹಿಳೆಯರ ಮೇಲೆ ಅತ್ಯಾಚಾರವಾಗಿದೆ ಎಂದು ಮೊನ್ನೆ ಕೇಂದ್ರ ಗೃಹ ಸಚಿವ ಅಡ್ವಾಣಿ ಲೋಕಸಭೆಯಲ್ಲಿ ಪ್ರಸ್ತಾಪವೊಂದರಲ್ಲಿ ತಿಳಿಸಿದ್ದು ವರದಿಯಾಗಿತ್ತು. ಈ ಅಂಕಿ ಅಂಶಗಳು ಹೆಣ್ಣುಮಕ್ಕಳು ಅದೆಷ್ಟು ಅಭದ್ರ ಪರಿಸ್ಥಿತಿಯಲ್ಲಿದ್ದಾರೆ ಎಂಬುದನ್ನು ಸೂಚಿಸಿದರೂ, ಇನ್ನಿತರ ಶೋಷಣೆಗೆ ಒಳಗಾಗಿ ವ್ಯಕ್ತಪಡಿಸಲಾಗದ ನೋವಿನಲ್ಲಿ ಮುಳುಗುತ್ತಿರುವ ಹೆಣ್ಣುಮಕ್ಕಳ ಪರಿಸ್ಥಿತಿಯನ್ನು ಈ ರೀತಿಯ ಅಂಕಿ ಅಂಶಗಳಿಂದ ಖಂಡಿತವಾಗಿಯೂ ಗುರುತಿಸಲು ಸಾಧ್ಯವಾಗದು.

●

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067